CPMG / KA / BG-GPO/13/2003-2005



# ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೦ | ಬೆಂಗಳೂರು, ಗುರುವಾರ, ಜೂನ್ ೨, ೨೦೦೫ (ಜೇಷ್ಠ ೧೨, ಶಕ ವರ್ಷ ೧೯೨೭) | ಸಂಚಿಕೆ ೨೨ |
|---|---|---|

## ಭಾಗ - ೩

## ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

**ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾಯ್ದೆ ಅಡಿ ಆಯುಕ್ತರು, ಗದಗ ಜಿಲ್ಲೆ: ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ: ಕಾಅಗ: ಕಾನಪ:1ಎಫ್-40/05/98 ದಿನಾಂಕ:23ನೇ ಏಪ್ರಿಲ್, 2005**

**ಅರ್ಜಿದಾರರು:**

1. ಶ್ರೀ ಕಂಟೆಪ್ಪ S/o ಬೀರಪ್ಪ ಬಂಡಿ @ ನಿಡಸೋಸಿ. R/o ಅಸೂಟಿ ತಾಲ್ಲೂಕು ರೋಣ.
2. ಶ್ರೀಮತಿ ಹನಮವ್ವಾ W/o ಕಂಟೆಪ್ಪ ಬಂಡಿ @ ನಿಡಸೋಸಿ. R/o ಅಸೂಟಿ ತಾಲ್ಲೂಕು ರೋಣ.

**ವಿರುದ್ಧ**

**ಪ್ರತಿವಾದಿಗಳು:**

1. ದಿ ಅಸಿಸ್ಟೆಂಟ್ ಎಕ್ಸಿಕ್ಯೂಟೀವ್ ಇಂಜಿನೀಯರ್, ಹೊಳೆಆಲೂರ ಬ್ರಾಂಚ್ ಸಬ್ ಡಿವಿಜನ್-ರೋಣ.
2. ದಿ ಎಕ್ಸಿಕ್ಯೂಟೀವ್ ಇಂಜಿನೀಯರ್ (ಇಲೆಕ್ಟ್ರಿಸಿಟಿ) ವರ್ಕ್ಸ್ ಮತ್ತು ಮೆಂಟೇನೆನ್ಸ್ ಡಿವಿಜನ್ ಹುಬ್ಬಳ್ಳಿ, ಇಲೆಕ್ಟ್ರಿಕಲ್ ಸಪ್ಲಾಯ್ ಕಂ. ಲಿಮಿಟೆಡ್ ಹೆಸ್ಕಾ ಲಿಮಿಟೆಡ್ ಗದಗ್.

**ಪ್ರಕಟಣೆ**

ಅರ್ಜಿದಾರರಾದ ಶ್ರೀ:ಶ್ರೀಮತಿ ಕಂಟೆಪ್ಪ ಬಿ. ಬಂಡಿ, ಹನಮವ್ವಾ ಕ. ಬಂಡಿ ಇವರು, ತಾವು ಮೃತ ಶ್ರೀ ಶೇಖಪ್ಪ ಕಂಟೆಪ್ಪಾ ನಿಡಸೋಸಿ ಇವರ ತಂದೆ ಮತ್ತು ತಾಯಿ ಎಂದು, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ. ಮೃತ ಶೇಖಪ್ಪ ಇವರು ಒಂದನೇ ಪ್ರತಿವಾದಿಗಳಾದ ದಿ ಅಸಿಸ್ಟೆಂಟ್ ಎಕ್ಸಿಕ್ಯೂಟೀವ್ ಇಂಜಿನೀಯರ್ ಹೊಳೆಆಲೂರ ಬ್ರಾಂಚ್, ಇವರಲ್ಲಿ ಗ್ಯಾಂಗ್‌ಮನ್ ಅಂಚೆ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ದ ಆಶ್ರಿತರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಗದಗ್ ಜಿಲ್ಲೆ ಗದಗ ಹಾಗೂ ಕಾರ್ಮಿಕ ನಷ್ಟ ಪರಿಹಾರ ಕಾನೂನು ಅಡಿ ಆಯುಕ್ತರು.

ಪಿ.ಆರ್.700

**ವೈದ್ಯಕೀಯ ಶಿಕ್ಷಣ ನಿರ್ದೇಶನಾಲಯ, ಆನಂದರಾವ್ ವೃತ್ತ, ಬೆಂಗಳೂರು**

**ಅಧಿಸೂಚನೆ**

**ಸಂಖ್ಯೆ: ವೈಶಿನಿ/ ಎನ್‌ಆರ್‌ಸಿ(2) 2/ 2005-06, ದಿನಾಂಕ: 24ನೇ ಮೇ, 2005**

**ವಿಷಯ :** 2005-06ನೇ ಸಾಲಿನ ಸರ್ಕಾರಿ ನರ್ಸಿಂಗ್ ಶಾಲೆಗಳಲ್ಲಿ ಶುಶ್ರೂಷಾ ತರಬೇತಿ ಕೋರ್ಸಿನ ಪ್ರವೇಶಕ್ಕಾಗಿ ಅರ್ಹ ಅಭ್ಯರ್ಥಿಗಳಿಂದ ನಿಗದಿತ ನಮೂನೆಯಲ್ಲಿ ಅರ್ಜಿಗಳನ್ನು ಆಹ್ವಾನಿಸುವ ಬಗ್ಗೆ.

1. ಈ ಕೆಳಗೆ ನಮೂದಿಸಿರುವ (ಅನುಬಂಧ-1ರಲ್ಲಿ) 11 ಸರ್ಕಾರಿ ಶುಶ್ರೂಷಾ ತರಬೇತಿಗೆ ಅರ್ಜಿಗಳನ್ನು ಆಹ್ವಾನಿಸಲಾಗಿದೆ. ಅರ್ಜಿಗಳನ್ನು ಸಂಬಂಧಿಸಿದ ಅಂದರೆ, ನೀವು ಅರ್ಜಿ ಹಾಕಲಿಚ್ಚಿಸುವ ಸಂಸ್ಥೆಯ ಅಧೀಕ್ಷಕರು/ ಪ್ರಾಂಶುಪಾಲರುಗಳಿಂದ ದಿನಾಂಕ: **30.05.2005**ರ ತರುವಾಯ ಅರ್ಜಿ ಶುಲ್ಕ ರೂ. 100/- (ಪ.ಜಾ/ ಪ.ಪಂ., ವರ್ಗ-1ಕ್ಕೆ ರೂ. 50/-) ಗಳನ್ನು ಡಿ.ಡಿ. ಮೂಲಕ ಸಂದಾಯ ಮಾಡಿ ನಿಯಮಿತ ಅರ್ಜಿಯನ್ನು ಪಡೆದು ನೀವು ಆಯ್ಕೆ ಬಯಸುವ ಶುಶ್ರೂಷಾ ಶಾಲೆಗೆ ನೇರವಾಗಿ ಸಲ್ಲಿಸತಕ್ಕದ್ದು.

- ಅಂಚೆ ಮೂಲಕ ಅರ್ಜಿಯನ್ನು ಪಡೆಯಬಯಸುವವರು ಅರ್ಜಿ ಶುಲ್ಕ ರೂ.100/- (ಪ.ಜಾ/ ಪ.ಪಂ. ವರ್ಗ-1ಕ್ಕೆ ರೂ.50/-)ರ ಡಿ.ಡಿ.ಯನ್ನು ರಾಷ್ಟ್ರೀಕೃತ ಬ್ಯಾಂಕ್‌ನಿಂದ ಪಡೆದು, ಜೊತೆಗೆ ಸ್ವವಿಳಾಸವಿರುವ 30x12 ರ ಲಕೋಟೆಗೆ (ಈಗಿರುವ ಅಂಚೆ ದರದಂತೆ) ಅಂಚೆ ಚೀಟಿ ಹಚ್ಚಿ ನೀವು ಆಯ್ಕೆ ಬಯಸುವ ಸಂಸ್ಥೆಯ ಅಧೀಕ್ಷಕರುಗಳಿಗೆ ಕಳುಹಿಸಿ ಅರ್ಜಿಯನ್ನು ಪಡೆಯಬಹುದಾಗಿದೆ.
- ಡಿ.ಡಿ.ಯಾಗಲಿ ಅಥವಾ ಅರ್ಜಿಯನ್ನಾಗಲಿ ಯಾವುದೇ ಕಾರಣಕ್ಕೂ ಈ ನಿರ್ದೇಶನಾಲಯಕ್ಕೆ ಕಳುಹಿಸಬಾರದು. ಒಂದು ವೇಳೆ ಕಳುಹಿಸಿದಲ್ಲಿ ಅಂಥಹವುಗಳನ್ನು ತಿರಸ್ಕರಿಸಲಾಗುವುದು.

2. ಸರ್ಕಾರದ ಅಧಿಸೂಚನೆ ಸಂಖ್ಯೆ ಆಕುಕ 44 ಎಂಪಿಎಸ್ 2003(3) ದಿನಾಂಕ: 03.07.2003ರ ಪ್ರಕಾರ ಅಭ್ಯರ್ಥಿಗಳು ಶುಶ್ರೂಷಾ ತರಬೇತಿಗೆ ಅರ್ಜಿ ಸಲ್ಲಿಸಲು ಈ ಕೆಳಕಂಡ ಅರ್ಹತೆಗಳನ್ನು ಹೊಂದಿರಬೇಕು.

- ಅಭ್ಯರ್ಥಿಯ ವಯಸ್ಸು ಅರ್ಜಿ ಸಲ್ಲಿಸಲು ಕೊನೆಯ ದಿನಾಂಕದಂದು 17 ವರ್ಷಗಳು ತುಂಬಿರಬೇಕು ಹಾಗೂ 35 ವರ್ಷಗಳನ್ನು ಮೀರಿರಬಾರದು.
- **ವಿದ್ಯಾರ್ಹತೆ:** ಸರ್ಕಾರಿ ಆದೇಶ ಸಂಖ್ಯೆ: ಆಕುಕ 2 ಎಂಎಂಇ 2005, ದಿನಾಂಕ: 26.04.2005ರ ಆದೇಶದನ್ವಯ ಭಾರತೀಯ ಶುಶ್ರೂಷಾ ಪರಿಷತ್ತಿನ ಪರಿಷ್ಕೃತ ಪಠ್ಯಕ್ರಮ 2001ರ ಪ್ರಕಾರ ಅಭ್ಯರ್ಥಿಯು ಪದವಿ ಪೂರ್ವ ಶಿಕ್ಷಣ (ದ್ವಿತೀಯ ಪಿಯುಸಿ) ಅಥವಾ ಅದಕ್ಕೆ ತತ್ಸಮಾನವಾದ ವಿದ್ಯಾರ್ಹತೆ ಹೊಂದಿದ ಹಾಗೂ ವಿಜ್ಞಾನ ವಿಷಯದಲ್ಲಿ (ಭೌತಶಾಸ್ತ್ರ, ರಸಾಯನಶಾಸ್ತ್ರ, ಜೀವಶಾಸ್ತ್ರ) ಶೇಕಡಾ 45 ಅಂಕಗಳೊಂದಿಗೆ ಉತ್ತೀರ್ಣರಾದವರಿಗೆ ಆದ್ಯತೆ ನೀಡಲಾಗುವುದು.
- ಅಭ್ಯರ್ಥಿಗಳು 1ನೇ ತರಗತಿಯಿಂದ 12ನೇ ತರಗತಿಯವರೆಗೆ ಕನಿಷ್ಠ 7 ವರ್ಷಗಳು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಹಾಗೂ 10 ರಿಂದ 12ನೇ ತರಗತಿ ಕರ್ನಾಟಕ ರಾಜ್ಯದಲ್ಲಿ ವ್ಯಾಸಂಗ ಮಾಡಿರಬೇಕು. ಅದಕ್ಕೆ ಸಂಬಂಧಿಸಿದ ವ್ಯಾಸಂಗ ಪ್ರಮಾಣ ಪತ್ರವನ್ನು ಲಗತ್ತಿಸಬೇಕು.
- ಅಭ್ಯರ್ಥಿಗಳು ಕರ್ನಾಟಕ ರಾಜ್ಯದಲ್ಲಿ ರಾಜ್ಯ ಸರ್ಕಾರದಿಂದ ಮಾನ್ಯತೆ ಪಡೆದ ಶಿಕ್ಷಣ ಸಂಸ್ಥೆಗಳಲ್ಲಿ ಪ್ರಥಮ ಹಾಗೂ ದ್ವಿತೀಯ ಪಿಯುಸಿ ಅಥವಾ ಅದಕ್ಕೆ ತತ್ಸಮಾನವಾದ ವ್ಯಾಸಂಗವನ್ನು ಮಾಡಿರಬೇಕು. ಅಥವಾ ಅಭ್ಯರ್ಥಿಯ ಪೋಷಕರು ಕರ್ನಾಟಕ ರಾಜ್ಯದಲ್ಲಿ ಕನಿಷ್ಟ 7 ವರ್ಷಗಳು ವ್ಯಾಸಂಗ ಮಾಡಿರುವ ಬಗ್ಗೆ ಮಾಹಿತಿ ನೀಡತಕ್ಕದ್ದು.
- **ತರಬೇತಿಯ ಅವಧಿ:** ಶುಶ್ರೂಷಾ ತರಬೇತಿಯ ಅವಧಿಯು ಮೂರು ವರ್ಷ ಆರು ತಿಂಗಳಾಗಿದ್ದು, ಸರ್ಕಾರಿ ನಿಯಮಗಳ ಪ್ರಕಾರ, ಸರ್ಕಾರಿ ಶುಶ್ರೂಷಾ ಶಾಲೆಗಳಲ್ಲಿ ವಿದ್ಯಾರ್ಥಿಗಳು ಶಿಷ್ಯವೇತನ ಪಡೆಯಲು ಅರ್ಹರಾಗಿರುತ್ತಾರೆ.

3. ತರಬೇತಿಗೆ ಗರ್ಭಿಣಿ ಅಭ್ಯರ್ಥಿಗಳಿಗೆ ಪ್ರವೇಶಕ್ಕೆ ಅವಕಾಶವಿರುವುದಿಲ್ಲ.
4. ಇಲಾಖೆಯಲ್ಲಿ ಕರ್ತವ್ಯ ನಿರ್ವಹಿಸುತ್ತಿರುವ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು ಇಲಾಖಾ ಅಧಿಕಾರಿಗಳ ಮುಖಾಂತರ (ಹುದ್ದೆಗೆ ನೇಮಕಾತಿ ಮಾಡುವ ಅಧಿಕಾರವುಳ್ಳವರಿಂದ) ಅರ್ಜಿಗಳನ್ನು ಸಲ್ಲಿಸಬೇಕು.

- ಅರ್ಜಿಯನ್ನು ಹಾಕಲಿಚ್ಚಿಸುವ ಇಲಾಖಾ ಅಭ್ಯರ್ಥಿಗಳು (ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರು) ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕಕ್ಕೆ 48 ವರ್ಷಗಳು ಮೀರಿರಬಾರದು.
- ಅರ್ಜಿದಾರರ ಹಿಂದಿನ ಹುದ್ದೆಗೆ ಬಾಂಡ್ ಅವಧಿ ಮುಗಿದು 5 ವರ್ಷಕ್ಕೆ ಕಡಿಮೆಯಿಲ್ಲದೇ ಸರ್ಕಾರಿ ಸೇವೆ ಸಲ್ಲಿಸಿರಬೇಕು, ಮತ್ತು ಖಾಯಂ ಪೂರ್ವಾವಧಿ ಘೋಷಣೆಯಾಗಿರಬೇಕು.
- ಅರ್ಜಿದಾರರು ತಮ್ಮ ವಿರುದ್ಧ ಯಾವುದೇ ರೀತಿಯ ಇಲಾಖಾ ವಿಚಾರಣೆ ಬಾಕಿ ಇಲ್ಲವೆಂದು ತಮ್ಮ ಮೇಲಾಧಿಕಾರಿಗಳಿಂದ ದೃಢೀಕರಣ ಪಡೆದು ಅರ್ಜಿಯೊಂದಿಗೆ ಲಗತ್ತಿಸುವುದು.
- ಈ ಮೇಲಿನ ಎಲ್ಲಾ ಮಾಹಿತಿಯೊಂದಿಗೆ ಭರ್ತಿ ಮಾಡಿದ ಅರ್ಜಿಗಳನ್ನು ಇಲಾಖಾ ಮುಖ್ಯಸ್ಥರ ಮುಖಾಂತರ ಈ ನಿರ್ದೇಶನಾಲಯಕ್ಕೆ ನಿಗದಿತ ದಿನಾಂಕದೊಳಗೆ ತಲುಪುವಂತೆ ಕಳುಹಿಸತಕ್ಕದ್ದು.

5. ಪ್ರತಿಯೊಂದು ಶುಶ್ರೂಷಾ ಶಾಲೆಗಳಲ್ಲಿರುವ ಒಟ್ಟು ತರಬೇತಿ ಸ್ಥಾನಗಳ ಪೈಕಿ ಶೇಕಡಾ 5ರಷ್ಟು ಪುರುಷ ಅಭ್ಯರ್ಥಿಗಳಿಗೆ ಆಯಾ ವರ್ಗಕ್ಕೆ ಅನುಸಾರವಾಗಿ 19 ಸ್ಥಾನಗಳನ್ನು ಮೀಸಲಿರಿಸಲಾಗಿದೆ.

- ಮಾಜಿ ಸೈನಿಕರ ಮಕ್ಕಳಿಗೆ ಶೇಕಡಾ 1ರಂತೆ ನಾಲ್ಕು ಸ್ಥಾನಗಳನ್ನು ಮೀಸಲಿರಿಸಲಾಗಿದೆ.
- ದ್ವಿತೀಯ ಪಿ.ಯು.ಸಿ. ಯಲ್ಲಿ ಉತ್ತೀರ್ಣರಾದ ಕಿರಿಯ ಮಹಿಳಾ ಆರೋಗ್ಯ ಸಹಾಯಕಿಯರಿಗೆ ಒಟ್ಟು ತರಬೇತಿ ಸ್ಥಾನಗಳಲ್ಲಿ ಶೇಕಡಾ 5ರಂತೆ 19 ಸ್ಥಾನಗಳನ್ನು ಮೀಸಲಿರಿಸಲಾಗಿದೆ. ತರಬೇತಿ ಅವಧಿಯು ಮೂರು ವರ್ಷಗಳು.

6. ಹೊರನಾಡ ಕನ್ನಡಿಗರು/ ಗಡಿನಾಡ ಕನ್ನಡಿಗರು ಅರ್ಜಿ ಸಲ್ಲಿಸಬಹುದಾಗಿದೆ. ಅರ್ಜಿ ಸಲ್ಲಿಸುವ ಅಭ್ಯರ್ಥಿಗಳಿಗೆ ಸಾಮಾನ್ಯ ಕನ್ನಡ ಓದಲು ಬರೆಯಲು ಬರಬೇಕು. ತರಬೇತಿ ಆಯ್ಕೆಗೆ ಮುನ್ನ ಕನ್ನಡ ಪರೀಕ್ಷೆ ನಡೆಸಲಾಗುವುದು.
7. ಮಹಿಳಾ ಅಭ್ಯರ್ಥಿಗಳಿಗೆ ಸರ್ಕಾರದ 11 ನರ್ಸಿಂಗ್ ಶಾಲೆಗಳಲ್ಲಿ ಆಯಾ ವರ್ಗಕ್ಕೆ ತಕ್ಕಂತೆ ಎಲ್ಲಾ ಪ್ರವರ್ಗಕ್ಕೆ ಸರ್ಕಾರಿ ಆದೇಶದನುಸಾರ ಮೀಸಲಿಡಲಾಗಿದೆ. (ಅನುಬಂಧ-IIರಲ್ಲಿ ವಿವರಿಸಿದೆ.)
8. ಅರ್ಜಿ ಹಾಕಲಿಚ್ಚಿಸುವ ಅಭ್ಯರ್ಥಿಗಳು ಅರ್ಜಿಯೊಂದಿಗೆ ಪಿ.ಯು.ಸಿ. ಎಸ್.ಎಸ್.ಎಲ್.ಸಿ. ಅಂಕಪಟ್ಟಿ, ಜನ್ಮ ದಿನಾಂಕದ ದೃಢೀಕರಣ ಪತ್ರ (ಟಿ.ಸಿ.) ಇತ್ತೀಚಿನ ದೇಹ ಧಾರ್ಡ್ಯತೆ ಪ್ರಮಾಣ ಪತ್ರ, ಜಾತಿ ಹಾಗೂ ಆದಾಯ ಪ್ರಮಾಣ ಪತ್ರ (ತಹಸೀಲ್ದಾರರಿಂದ ಪ್ರಮಾಣೀಕರಿಸಿರಬೇಕು) ಇತ್ತೀಚಿನ ಭಾವಚಿತ್ರವನ್ನು ಅರ್ಜಿಯೊಂದಿಗೆ ಕಡ್ಡಾಯವಾಗಿ ಲಗತ್ತಿಸಿರಬೇಕು.

- ಅರ್ಜಿಯನ್ನು ಸ್ವಂತ ಬರವಣಿಗೆಯಿಂದ ಕನ್ನಡ ಭಾಷೆಯಲ್ಲಿ ಭರ್ತಿ ಮಾಡಬೇಕು.
- ಎಲ್ಲಾ ರೀತಿಯಿಂದ ಕ್ರಮವಾಗಿ ಭರ್ತಿ ಮಾಡಿದ ಅರ್ಜಿಗಳನ್ನು ಪ್ರಮಾಣ ಪತ್ರಗಳ ನಕಲುಗಳೊಂದಿಗೆ ಅರ್ಜಿ ಪಡೆದ ಶುಶ್ರೂಷಾ ಶಾಲೆಗಳ ವಿಳಾಸಕ್ಕೆ ನಿಗದಿಪಡಿಸಿದ ದಿನಾಂಕದೊಳಗೆ ಅರ್ಜಿಗಳು ತಲುಪುವಂತೆ ಕಳುಹಿಸತಕ್ಕದ್ದು.

9. ಅರ್ಜಿ ಫಾರಂಗಳನ್ನೊಳಗೊಂಡ ಲಕೋಟೆಯ ಮೇಲೆ 2005ನೇ ಸಾಲಿಗೆ ಶುಶ್ರೂಷಾ ತರಬೇತಿ ಕೋರ್ಸಿನ ಪ್ರವೇಶಕ್ಕಾಗಿ ಅರ್ಜಿ ಎಂಬುದಾಗಿ ದಪ್ಪ ಅಕ್ಷರಗಳಲ್ಲಿ ಬರೆದಿರಬೇಕು.

10. ಇಲಾಖಾ ಅಭ್ಯರ್ಥಿಗಳು ತಮ್ಮ ಅರ್ಜಿಗಳನ್ನು ಮೇಲಾಧಿಕಾರಿಗಳ ಮೂಲಕ ದಿನಾಂಕ: **14.06.2005** ರೊಳಗಾಗಿ ಈ ನಿರ್ದೇಶನಾಲಯಕ್ಕೆ ತಲುಪುವಂತೆ ಕ್ರಮ ವಹಿಸತಕ್ಕದ್ದು.
   - ➢ ಮಾಜಿ ಸೈನಿಕರ ಮಕ್ಕಳ ಮೀಸಲಿರಿಸಿರುವ ಸ್ಥಾನಕ್ಕೆ ಸಲ್ಲಿಸಿದ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳು ದಿನಾಂಕ: **14.06.2005**ರ ಒಳಗಾಗಿ ಈ ನಿರ್ದೇಶನಾಲಯಕ್ಕೆ ಕಳುಹಿಸತಕ್ಕದ್ದು.

11. ಅಭ್ಯರ್ಥಿಗಳನ್ನು ಸಂದರ್ಶನಕ್ಕೆ ಕರೆದಾಗ ಅವರುಗಳಿಗೆ ಸ್ಥಳ ಮತ್ತು ದಿನಾಂಕವನ್ನು ತಿಳಿಸಲಾಗುವುದು. ಸಂದರ್ಶನಕ್ಕೆ ಅವರವರ ಸ್ವಂತ ರಜೆ ಮತ್ತು ಖರ್ಚಿನಲ್ಲಿ ಹಾಜರಾಗತಕ್ಕದ್ದು. ಪಿ.ಯು.ಸಿ./ ಎಸ್.ಎಸ್.ಎಲ್.ಸಿ. ಜನ್ಮ ದಿನಾಂಕದ ದೃಢೀಕರಣ ಪತ್ರ (ಟಿ.ಸಿ.) ಇತ್ತೀಚಿನ ದೇಹ ಧಾರ್ಢ್ಯತೆ ಪ್ರಮಾಣ ಪತ್ರ ಹಾಗೂ ಜಾತಿ ಮತ್ತು ಆದಾಯ ಪ್ರಮಾಣ ಪತ್ರಗಳ ಮೂಲ ಪ್ರಮಾಣ ಪತ್ರಗಳನ್ನು ಸಂದರ್ಶನದ ಸಮಯದಲ್ಲಿ ಕಡ್ಡಾಯವಾಗಿ ಹಾಜರುಪಡಿಸತಕ್ಕದ್ದು.

12. ತರಬೇತಿಯನ್ನು ಪೂರ್ಣಗೊಳಿಸಿದ ಎಲ್ಲಾ ಅಭ್ಯರ್ಥಿಗಳಿಗೆ ಸರ್ಕಾರದಲ್ಲಿ ಸೇವೆ ಸಲ್ಲಿಸಲು ನೇಮಕ ಮಾಡಿಕೊಳ್ಳುವ ಖಾತರಿ ನೀಡುವುದಿಲ್ಲ. ತರಬೇತಿ ಅವಧಿಯಲ್ಲಿ ಶಿಷ್ಯವೇತನವನ್ನು ಪಡೆಯುವುದರಿಂದ ಇಬ್ಬರು ಖಾಯಂ ರಾಜ್ಯ ಸರ್ಕಾರಿ ನೌಕರರ ಜಾಮೀನಿನಿಂದ ಕೂಡಿದ ಬಂಧಪತ್ರ ಸಲ್ಲಿಸಬೇಕು.

13. ಕೊನೆಯ ದಿನಾಂಕದ ನಂತರ ಬರುವ ಅಥವಾ ಅಪೂರ್ಣವಾದ ಅರ್ಜಿಗಳನ್ನು ಯಾವುದೇ ಕಾರಣ ನೀಡದೇ ತಿರಸ್ಕರಿಸಲಾಗುವುದು. ಈ ಸಂಬಂಧದಲ್ಲಿ ಯಾವುದೇ ಪತ್ರ ವ್ಯವಹಾರಕ್ಕೆ ಆಸ್ಪದವಿರುವುದಿಲ್ಲ. ತರಬೇತಿಗೆ ಸಂಬಂಧಪಟ್ಟ ಹೆಚ್ಚಿನ ವಿವರಗಳನ್ನು ಶುಶ್ರೂಷಾ ಶಾಲೆಯ ಮುಖ್ಯಸ್ಥರಿಂದ ಎಲ್ಲಾ ಕೆಲಸದ ದಿನಗಳಂದು ಕಛೇರಿ ವೇಳೆಯಲ್ಲಿ ಪಡೆಯಬಹುದು.
   - ➢ ಶುಶ್ರೂಷಾ ತರಬೇತಿ ಶಾಲೆಗಳಲ್ಲಿ ಅರ್ಜಿಗಳನ್ನು ಪಡೆಯಲು ಕೊನೆಯ ದಿನಾಂಕ: **10.06.2005**ರ ಸಂಜೆ 4.00 ಗಂಟೆಯವರೆಗೆ.
   - ➢ ಭರ್ತಿ ಮಾಡಿದ ಅರ್ಜಿಗಳನ್ನು ಸಂಬಂಧಪಟ್ಟ ಸಂಸ್ಥೆಗಳಲ್ಲಿ ಸಲ್ಲಿಸಲು ಕೊನೆಯ ದಿನಾಂಕ: **13.06.2005**ರ ಸಂಜೆ 4.00 ಗಂಟೆಯವರೆಗೆ.

14. ಈ ಮೂಲಕ ಎಲ್ಲಾ ವಿವರಗಳೊಂದಿಗೆ ಭರ್ತಿ ಮಾಡಿದ ಅರ್ಜಿಯನ್ನು ನಿಗದಿತ ದಿನಾಂಕದೊಳಗೆ ನೀವು ಸೇರಲಿಚ್ಛಿಸುವ ಶುಶ್ರೂಷಾ ಶಾಲೆಗೆ ಕಳುಹಿಸತಕ್ಕದ್ದು.

ನಿರ್ದೇಶಕರು, ವೈದ್ಯಕೀಯ ಶಿಕ್ಷಣ.

**ಅನುಬಂಧ-II**

**ಸರ್ಕಾರಿ ಆದೇಶ ಸಂಖ್ಯೆ: ಸಕಇ /222/ ಬಿಸಿಎ/ 20.09.1994 ಮತ್ತು ಸಂಖ್ಯೆ: ಸಕಇ/ 225/ ಬಿಸಿಎ/ 2000 ದಿನಾಂಕ: 30.03.2002**

| ಸಂ. | ತರಬೇತಿ ಶಾಲೆ ಹೆಸರು | ಪ್ರವೇಶ ಮಿತಿ | ಮಾಜಿ ಸೈನಿಕರ ಮಕ್ಕಳ ಮೀಸಲು ಸ್ಥಾನ 1% | ಪುರುಷ ಅಭ್ಯರ್ಥಿಗಳ ಮೀಸಲು ಸ್ಥಾನ 5% | ವರ್ಗಕ್ಕನು ಸಾರವಾಗಿ | ಇಲಾಖಾ ಅಭ್ಯರ್ಥಿಗಳ ಮೀಸಲು ಸ್ಥಾನ 5% | ಮಹಿಳಾ ಅಭ್ಯರ್ಥಿಗಳ ಮೀಸಲು ಸ್ಥಾನ | ಆಯಾ ವರ್ಗಕ್ಕನುಸಾರವಾಗಿ | | | | | | | |
|---|---|---|---|---|---|---|---|---|---|---|---|---|---|---|---|
| | | | | | | | | GM | I | 2A | 2B | 3A | 3B | SC | ST |
| 1. | ಬೌರಿಂಗ್ ಆಸ್ಪತ್ರೆ, ಬೆಂಗಳೂರು. | 40 | - | 2 | 2A/ GM | 2 | 36 | 18 | 2 | 5 | 1 | 2 | 2 | 5 | 1 |
| 2. | ವಿಕ್ಟೋರಿಯಾ ಆಸ್ಪತ್ರೆ, ಬೆಂಗಳೂರು. | 45 | - | 2 | 2B/ GM | 2 | 41 | 20 | 2 | 6 | 2 | 2 | 2 | 6 | 1 |
| 3. | ಕೆ.ಆರ್. ಆಸ್ಪತ್ರೆ, ಮೈಸೂರು. | 45 | - | 2 | 3A/ GM | 2 | 41 | 20 | 2 | 6 | 2 | 2 | 2 | 6 | 1 |
| 4. | ಕೆ.ಎಂ.ಸಿ. ಆಸ್ಪತ್ರೆ, ಹುಬ್ಬಳ್ಳಿ. | 45 | - | 2 | 3B/ GM | 2 | 41 | 20 | 2 | 6 | 2 | 2 | 2 | 6 | 1 |
| 5. | ವೆನ್‌ಲಾಕ್ ಆಸ್ಪತ್ರೆ, ಮಂಗಳೂರು. | 35 | 1 | 2 | SC/ GM | 2 | 30 | 15 | 1 | 5 | 1 | 1 | 1 | 5 | 1 |
| 6. | ಜಿಲ್ಲಾ ಆಸ್ಪತ್ರೆ, ಗುಲ್ಬರ್ಗಾ. | 35 | 1 | 2 | ST/ GM | 2 | 30 | 15 | 1 | 5 | 1 | 1 | 1 | 5 | 1 |
| 7. | ಜಿಲ್ಲಾ ಆಸ್ಪತ್ರೆ, ಬೆಳಗಾಂ. | 35 | 1 | 2 | Cat I/ GM | 2 | 30 | 15 | 1 | 5 | 1 | 1 | 1 | 5 | 1 |
| 8. | ಜಿಲ್ಲಾ ಆಸ್ಪತ್ರೆ, ಬಳ್ಳಾರಿ. | 30 | 1 | 2 | SC/ GM | 2 | 25 | 12 | 1 | 4 | 1 | 1 | 1 | 4 | 1 |
| 9. | ಜಿಲ್ಲಾ ಆಸ್ಪತ್ರೆ, ಬಿಜಾಪುರ. | 30 | - | 1 | GM | 1 | 28 | 14 | 1 | 4 | 1 | 1 | 2 | 4 | 1 |
| 10. | ಸಿ.ಜಿ. ಆಸ್ಪತ್ರೆ, ದಾವಣಗೆರೆ. | 30 | - | 1 | 2A | 1 | 28 | 14 | 1 | 4 | 1 | 1 | 2 | 4 | 1 |
| 11. | ಜಿಲ್ಲಾ ಆಸ್ಪತ್ರೆ, ಚಿತ್ರದುರ್ಗ. | 20 | - | 1 | GM | 1 | 18 | 9 | 1 | 2 | 1 | 1 | 1 | 2 | 1 |
| | | **390** | **4** | **19** | | **19** | **348** | **172** | **15** | **52** | **14** | **15** | **17** | **52** | **11** |

ಪುರುಷ ಅಭ್ಯರ್ಥಿಗಳಿಗೆ-5%

ಇಲಾಖಾ ಅಭ್ಯರ್ಥಿಗಳಿಗೆ (ಎ.ಎನ್.ಎಮ್) -5%

ಮಾಜಿ ಸೈನಿಕರ ಮಕ್ಕಳಿಗೆ-1%

ಪಿ.ಆರ್. 786

ನಿರ್ದೇಶಕರು, ವೈದ್ಯಕೀಯ ಶಿಕ್ಷಣ.

## ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ

## ಅಧಿಸೂಚನೆ

**ಸಂಖ್ಯೆ: ಪಸಂಮೀ 148 ಮೀಇಇ 2004, ದಿನಾಂಕ: 4ನೇ ಮೇ, 2005**

ಮೀನುಗಾರಿಕೆಯಲ್ಲಿ ತೊಡಗಿಸಿಕೊಂಡಿರುವವರ, ಅದರಲ್ಲೂ ವಿಶೇಷವಾಗಿ, ಸಾಂಪ್ರದಾಯಿಕ ದೋಣಿಯನ್ನು ಉಪಯೋಗಿಸಿ ಮೀನುಗಾರಿಕೆ ಕೈಗೊಳ್ಳುವವರ ಹಿತಾಸಕ್ತಿಯನ್ನು ಕಾಪಾಡಲು ಮತ್ಸ್ಯ ಸಂಪತ್ತನ್ನು ಸಂರಕ್ಷಿಸುವ ಅವಶ್ಯಕತೆಯಿರುವುದೆಂದು ಕರ್ನಾಟಕ ಸರ್ಕಾರವು ಮನಗಂಡಿರುವ ಕಾರಣದಿಂದಾಗಿ;

ಮೀನುಗಾರಿಕೆ ಸಂಪತ್ತನ್ನು ಸಂರಕ್ಷಿಸುವ ಅವಶ್ಯಕತೆಯಿರುವುದರಿಂದ, ವೈಜ್ಞಾನಿಕ ರೀತಿಯಲ್ಲಿ ಮೀನುಗಾರಿಕೆ ಕೈಗೊಳ್ಳಲು ನಿಯಂತ್ರಿಸಬೇಕಾಗಿರುವುದಲ್ಲದೆ ಮೇಲಾಗಿ ಕಡಲಿನಲ್ಲಿ ಕಾನೂನು ಮತ್ತು ಸುವ್ಯವಸ್ಥೆಯನ್ನು ಕಾಪಾಡುವ ಅವಶ್ಯಕತೆ ಇದೆಯೆಂಬ ಕಾರಣದಿಂದಾಗಿ;

ಕಡಲಲ್ಲಿ ವಾತಾವರಣದ ವೈಪರೀತ್ಯದಿಂದಾಗಿ ಮೀನುಗಾರರ ಜೀವಕ್ಕೆ ಮತ್ತು ಆಸ್ತಿಗಳಿಗೆ ಸಂಭವಿಸುವ ಅಪಘಾತಗಳಿಂದ ಉಂಟಾಗಬಹುದಾದ ನಷ್ಟವನ್ನು ತಪ್ಪಿಸಬೇಕೆಂಬ ಕಾರಣದಿಂದಾಗಿ;

ಕರ್ನಾಟಕ ಕರಾವಳಿ ಮೀನುಗಾರಿಕೆ (ನಿಯಂತ್ರಣ) ಕಾಯಿದೆ 1986ರ ನಿಯಮ 3ರಡಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಮತ್ತು ಈ ದಿಸೆಯಲ್ಲಿ ಈ ಹಿಂದೆ ಹೊರಡಿಸಲಾಗಿದ್ದ ಅಧಿಸೂಚನೆ ಸಂಖ್ಯೆ: ಎಹೆಚ್‌ಎಫ್/ 107/ ಎಸ್‌ಎಫ್‌ಎಂ/ 98 ದಿನಾಂಕ: 09.10.2000ವನ್ನು ರದ್ದುಗೊಳಿಸಿ ದಕ್ಷಿಣ ಕನ್ನಡ, ಉಡುಪಿ ಮತ್ತು ಕಾರವಾರ ಜಿಲ್ಲೆಗಳನ್ನೊಳಗೊಂಡಂತೆ ಕರ್ನಾಟಕದ ಕರಾವಳಿಯಲ್ಲಿ ಮೀನುಗಾರಿಕೆಗಾಗಿ ಯಾವುದೇ ಬಲೆಗಳನ್ನು/ ಸಾಧನಗಳನ್ನು ಉಪಯೋಗಿಸಿ ಯಾಂತ್ರಿಕ ದೋಣಿಗಳ ಬಳಕೆಯನ್ನು ಪ್ರತಿವರ್ಷ 15ನೇ ಜೂನ್ ರಿಂದ 29ನೇ ಜುಲೈವರೆಗೆ (ಎರಡು ದಿವಸಗಳು ಸೇರಿ) ಒಟ್ಟು 45 (ನಲವತ್ತೈದು) ದಿವಸಗಳ ಅವಧಿಗೆ ನಿಷೇಧಿಸಿ ಕರ್ನಾಟಕ ಸರ್ಕಾರವು ಆದೇಶಿಸಿದೆ.

ಆದಾಗ್ಯೂ, ಮೇಲ್ಕಾಣಿಸಿದ ನಿಷೇಧಿತ ಅವಧಿಯಲ್ಲಿ ಕೇವಲ ದೋಣಿಯನ್ನು ಸಾಗಿಸುವ ಉದ್ದೇಶಕ್ಕಾಗಿಯೇ 10 ಅಶ್ವಶಕ್ತಿಯವರೆಗಿನ ಸಾಮರ್ಥ್ಯದ ಐ.ಬಿ.ಎಂ. ಅಥವಾ ಓ.ಬಿ.ಎಂ. ಯಂತ್ರವನ್ನು ಅಳವಡಿಸಿದ ಅಥವಾ ಅಳವಡಿಸದಿರುವ ಸಾಂಪ್ರದಾಯಿಕ ಮೀನುಗಾರಿಕೆ ದೋಣಿಗಳು ಮೀನುಗಾರಿಕೆಯನ್ನು ಕೈಗೊಳ್ಳಲು ಅನುಮತಿಸಿದೆ.

ಸರ್ಕಾರದ ಈ ಆದೇಶವನ್ನು ಉಲ್ಲಂಘಿಸುವ ಮೀನುಗಾರಿಕೆ ದೋಣಿಗಳು ಮತ್ತು ಮೀನುಗಾರರು ಮೇಲ್ಕಾಣಿಸಿದ ಕಾಯಿದೆಯಲ್ಲಿ ವಿಧಿಸಲಾಗಿರುವ ದಂಡನೆಗಳಿಗೆ ಹೊಣೆಯಾಗುವುದಲ್ಲದೆ ಒಂದು ವರ್ಷದ ಅವಧಿಗೆ ರಾಜ್ಯ ಮಾರಾಟಕರ ರಹಿತ ಡೀಸೆಲ್ ಪಡೆಯಲು ಮತ್ತು ಕೇಂದ್ರ ಅಬ್ಕಾರಿ ತೆರಿಗೆಯ ಮರುಪಾವತಿಯನ್ನು ಪಡೆಯಲು ಅನರ್ಹರಾಗುತ್ತಾರೆ.

ಕರ್ನಾಟಕ ರಾಜ್ಯಪಾಲರ ಆದೇಶಾನುಸಾರ ಮತ್ತು ಅವರ ಹೆಸರಿನಲ್ಲಿ,
**ಡಿ. ಕಮಲಕುಮಾರ್**
ಸರ್ಕಾರದ ಅಧೀನ ಕಾರ್ಯದರ್ಶಿ,
ಪಶುಸಂಗೋಪನೆ ಮತ್ತು ಮೀನುಗಾರಿಕೆ ಇಲಾಖೆ (ಮೀ).

## ANIMAL HUSBANDRY AND FISHERIES DEPARTMENT
## NOTIFICATION
### No. AHF 148 SFM 2004, Bangalore, Dated: 4th May, 2005

WHEREAS, the Government of Karnataka are convinced of the need to conserve fishery wealth and thereby to protect the interest of persons engaged in fishing, particularly those engaged in fishing using traditional fishing crafts.

AND WHEREAS, it is necessary to conserve the fishery wealth and regulate fishing on a scientific basis. In addition it is also imperative to maintain Law and Order situation in the off-shore.

AND WHEREAS, there is a need to avoid loss of fishermen lives and their properties due to accident in the sea during squally weather conditions.

NOW, THEREFORE, in exercise of the powers conferred under section 3 of the Karnataka Marine Fishing (Regulation) Act, 1986 and in supersession of the earlier Notification No: AHF 107 SFM 98 dated 09.10.2000, the Government of Karnataka hereby prohibit the operation of mechanised boats for fishing in any kind of nets/ gears in the coasts of Karnataka comprising of Dakshina Kannada, Udupi and Uttara Kannada Districts for a period of 45 (forty five) day with effect from 15th of June to 29th of July (both days inclusive) of every year.

However, during the above ban period, only the traditional fishing crafts without or fitted with a motor of the capacity of upto 10 H.P.I.B.M. or O.B.M. for propulsion purpose only are permitted sea-fishing.

The fishing vessels and fishermen who violate the above orders of Government will be liable for penalties as prescribed in the above Act and they will also become ineligible for getting the benefits of State Sales Tax exempt diesel and also refund of Central Excise Duty for a period of one year.

By Order and in the name of the Governor of Karnataka,
**D. KAMALAKUMAR**
Under Secretary to Government,
Animal Husbandry and Fisheries Department (F).

PR-747

## IN THE COURT OF ADDITIONAL REGISTRAR OF CO-OPERATIVE SOCIETIES, (CONSUMERS & MARKETING) OFFICE OF THE REGISTRAR OF CO-OP. SOCIETIES, NO.1, ALI ASKER ROAD, BANGALORE-560 052
### Dispute No.A (C & M): D7/ 1408/98-99

**PETITIONER**
The General Manager, Karnataka State Cooperative Marketing Federation, No.8, Cunningham Road, Bangalore-52

**RESPONDENT**
Sri R.N. Chikkegowda, No.1595, 5th Main, 'E' Block, II Phase, Rajajinagar, Bangalore-10.

### NOTICE OF CONFIRMATION OF CONDITIONAL ATTACHMENT OF IMMOVABLE PROPERTIES UNDER SECTION 103(2) OF THE KARNATAKA COOPERATIVE SOCIETIES ACT 1959

1) The Petitioner has filed the above dispute before me under Section 70 of the Karnataka Cooperative Societies Act 1959 for recovery of a sum of Rs. 4,27,154.90 (Rupees Four lakh twenty seven

thousand one hundred fifty four and paise ninty only) along with interest at the rate of 18% per annum from the date of misappropriation till the date of payment from the Respondent. The dispute is taken on file under Dispute No.A (C & M)/ D7/1408/98-99.

2) It is brought to my notice by the petitioner by an application filed under Section 103 of the KCS Act 1959 that the Respondent is contemplating to convey, alienate or dispose the immovable properties belonging to the Respondent, with the intension to delay the enforcement or execution of any award or order that may be passed in the above dispute against him.

3) The Petitioner has further stated that if the Respondent is not prevented from doing so, the petitioner society will be left with no means to recover the amount even if any award/ decree is obtained against the Respondent.

4) I am fully convinced that the disposal of the schedule property of the Respondent would defeat or delay the enforcement or execution of any order/ decree that may be passed against the Respondent.

Hence, I had ordered to issue the notice of conditional attachment on 5th March, 2005 informing the person concerned who is interested in purchasing or acquiring the properties.

Further it was informed to the Respondent that if he desires to have the conditional attachment raised, he should furnish cash security to the extent of Rs. 4,50,000/- (Rupees Four lakhs fifty thousand only) by depositing the said amount in the petitioner cooperative society in the name of the Additional Registrar of Cooperative Societies, (Consumers & Marketing), Bangalore under suspense Account and produce the original receipt/ challan issued thereon to this office on or before 11.04.2005, without fail and further informed that if he failed to furnish the cash security as ordered above within the stipulated period, this conditional attachment will be made abosolute.

After the completion of the said period the case was taken up for hearing on 11.04.2005 as it was seen from the record that though the conditional attachment notices were duly served on the party, the Respondent has failed to furnish the security. Hence I am of the opinion to confirm the conditional attachment notice dated: 5th March 2005. Therefore I, Channappa. V., Addl. Registrar of Coop. Societies (Consumer and Marketing) by exercising the powers vested in me by Government Order Notification No. CMW/69/CLM/2001, dated: 21.11.2001 pass the following order.

**ORDER**

The conditional attachment notice dated: 5th March, 2005 is made absolute. The property belonging to the Respondent mentioned in the schedule below are hereby attached pending disposal of the dispute.

**SCHEDULE OF PROPERTIES**

**Item No. 1:** All that piece and parcel of the property bearing No. 13, situated in Ramanakoppalu, K.R. Pet Taluk, S.B. Halli Hobli, Mandya District bounded on the:

East by : Chikkaiah's land
West by : Road
North by : Nanjappa's House
South by : Patil Karigowda's House

**Item No. 2:** All that piece and parcel of property bearing survey No.32/2, measuring 2.33 acre, situated at Ramanakoppalu, K.R. Pet Taluk, S.B. Halli Hobli, Mandya District.

Given under my hand and seal this 11.04.2005

Additional Registrar of Coop. Societies,
(Consumers & Marketing)

PR-702

**ಕರ್ನಾಟಕ ಲೋಕಸೇವಾ ಆಯೋಗ**

**ಅಧಿಕೃತ ಜ್ಞಾಪನ**

**No. E(3) 193/05-06 PSC, Dated: 3rd May, 2005**

**ವಿಷಯ:** ನಗರಾಭಿವೃದ್ಧಿ ಇಲಾಖೆಯಲ್ಲಿ 45 ಹುದ್ದೆಗಳ ಕಿರಿಯ ಅಭಿಯಂತರರ (ವಿದ್ಯುತ್) ಆಯ್ಕೆಗಾಗಿ ಆಯೋಗವು ದಿನಾಂಕ: 20.12.2004ರಂದು ನಡೆಸಿದ ಸ್ಪರ್ಧಾತ್ಮಕ ಪರೀಕ್ಷೆಗೆ ನೋಂದಣಿ ಸಂಖ್ಯೆ: 61329ರ ಅಡಿ ಅಭ್ಯರ್ಥಿಯಾಗಿದ್ದ ಶ್ರೀ ಶ್ರೀಧರ್ ಆರ್. ಇವರು ಎಸಗಿದ ದುರಾಚಾರ ಪ್ರಕರಣದ ಬಗ್ಗೆ.

**ಓದಲಾಗಿದೆ :**
1. ಅಧಿಸೂಚನೆ ಸಂಖ್ಯೆ: ಪಿಎಸ್‌ಸಿ 1 ಆರ್‌ಟಿಬಿ 1 ಸ್ವಪ/ 2004 ದಿನಾಂಕ: 13.09.2004.
2. ಶ್ರೀ ಶ್ರೀಧರ್ ಆರ್. ಇವರ ಅರ್ಜಿ.
3. ಪರೀಕ್ಷೆಗಳ ಮೇಲ್ವಿಚಾರಕರು ಹಾಗೂ ಮುಖ್ಯೋಪಾಧ್ಯಾಯರು ಕ.ವಿ. ಟ್ರಸ್ಟ್ (ರಿ) ಇವರ ಪತ್ರದ ದಿನಾಂಕ: 20.12.2004.
4. ಪರೀಕ್ಷೆಯಲ್ಲಿ ನಮೂನೆ "ಎ" ನಲ್ಲಿ ಪಡೆದ ಸಹಿ.

5. ಆಯೋಗದ ವತಿಯಿಂದ ಶ್ರೀಧರ್ ಆರ್ ಇವರಿಗೆ ಕಾರಣ ಕೇಳುವ ನೋಟೀಸನ್ನು ಜಾರಿ ಮಾಡಿದ ದಿನಾಂಕ: 05.01.2005.
6. ದಿನಾಂಕ: 05.01.2005ರಂದು ಆಯೋಗವು ಜಾರಿ ಮಾಡಿದ ನೋಟೀಸಿಗೆ ಅಭ್ಯರ್ಥಿ ಉತ್ತರಿಸಿದ ಮನವಿ ದಿನಾಂಕ: 08.01.2005.

ನಗರಾಭಿವೃದ್ಧಿ ಇಲಾಖೆಯಲ್ಲಿನ 45 ಹುದ್ದೆಗಳ ಕಿರಿಯ ಅಭಿಯಂತರರ (ವಿದ್ಯುತ್) ನೇಮಕಾತಿಗಾಗಿ ಆಯೋಗವು ದಿನಾಂಕ: 20.12.2004ರಂದು ನಡೆಸಿದ ಸ್ಪರ್ಧಾತ್ಮಕ ಪರೀಕ್ಷೆಗೆ ಶ್ರೀ ಶ್ರೀಧರ್ ಆರ್. S/o ರಂಗಯ್ಯ, ಆರ್. ಮನೆ ನಂ. 2023, ದಾನಂ ನಿಲಯ, ನರಸಿಂಹ ಲೇಔಟ್, ವಿಜಯನಗರ, ಬೆಂಗಳೂರು ಜನ್ಮ ದಿನಾಂಕ: 31.10.1985 ಇವರ ನೋಂದಣಿ ಸಂಖ್ಯೆ: 61329ರ ಅಡಿ ಅಭ್ಯರ್ಥಿಯಾಗಿದ್ದು ದಿನಾಂಕ: 20.12.2004ರ ಮಧ್ಯಾಹ್ನ ನಿರ್ದಿಷ್ಟ ಪತ್ರಿಕೆಯ ಉತ್ತರ ಪತ್ರಿಕೆಯನ್ನು ಕೊಠಡಿ ಮೇಲ್ವಿಚಾರಕರವರಿಗೆ ಹಿಂದಿರುಗಿಸದೆ ಅದರ ಬದಲಿಗೆ ಪ್ರಶ್ನೆ ಪತ್ರಿಕೆ ನೀಡಿ ಪರೀಕ್ಷಾ ಕೊಠಡಿಯಿಂದ ಹೋಗಿರುತ್ತಾರೆಂದು ಪರೀಕ್ಷಾ ಕೇಂದ್ರ ಮುಖ್ಯಸ್ಥರು ತಮ್ಮ ಪತ್ರ ದಿನಾಂಕ: 20.12.2004ರಂದೇ ಆಯೋಗಕ್ಕೂ ಮತ್ತು ಪೊಲೀಸ್ ಠಾಣೆಗೆ ದೂರು ಸಲ್ಲಿಸಿರುವುದಾಗಿ ತಿಳಿಸಿರುತ್ತಾರೆ.

ಆಯೋಗದ ವತಿಯಿಂದ ಕಾರಣ ಕೇಳುವ ನೋಟೀಸನ್ನು ದಿನಾಂಕ: 05.01.2005ರಂದು ಶ್ರೀ ಶ್ರೀಧರ್ ಆರ್. ರವರಿಗೆ ಜಾರಿ ಮಾಡಲಾಗಿ 10 ದಿನಗಳ ಒಳಗಾಗಿ ಲಿಖಿತ ಸಮಜಾಯಿಷಿ ನೀಡದಿದ್ದಲ್ಲಿ ಪರೀಕ್ಷೆಯ ಅಭ್ಯರ್ಥಿತ್ವವನ್ನು ರದ್ದು ಪಡಿಸುವ ಮತ್ತು ಆಯೋಗ ನಡೆಸುವ ಯಾವುದೇ ಪರೀಕ್ಷೆಗೆ ಕೂರುವುದರಿಂದ ಖಾಯಂ ಆಗಿ ಡಿಬಾರ್ ಮಾಡುವ ದಂಡನೆಯನ್ನು ವಿಧಿಸಲಾಗುವುದೆಂದು ತಿಳಿಸಲಾಗಿತ್ತು.

ಆಯೋಗದ ನೋಟೀಸಿಗೆ ಮರು ಉತ್ತರವಾಗಿ ಅಭ್ಯರ್ಥಿಯು ದಿನಾಂಕ: 08.01.2005ರಂದು ಸಲ್ಲಿಸಿರುವ ಲಿಖಿತ ಹೇಳಿಕೆಯಲ್ಲಿ ಕಣ್ತಪ್ಪಿನಿಂದ ಉತ್ತರ ಪತ್ರಿಕೆಯನ್ನು ತನ್ನೊಂದಿಗೆ ತೆಗೆದುಕೊಂಡು ಹೋಗಿದ್ದು ಮನೆಗೆ ಹೋದ ನಂತರ ತಾನು ಮಾಡಿದ ತಪ್ಪು ಅರಿವಿಗೆ ಬಂತು ಇದರಲ್ಲಿ ಯಾವುದೇ ದುರುದ್ದೇಶವಿರುವುದಿಲ್ಲವೆಂದು ಕ್ಷಮಿಸುವಂತೆ ಕೋರಿರುತ್ತಾರೆ.

ಅಭ್ಯರ್ಥಿಯು ತಪ್ಪನ್ನು ಒಪ್ಪಿಕೊಂಡಿರುವುದರಿಂದಲೂ ಮತ್ತು ಕ್ಷಮಿಸುವಂತೆ ಕೋರಿರುವುದರಿಂದ ಪ್ರಕರಣಕ್ಕೆ ಸಂಬಂಧಿಸಿದ ದಾಖಲೆಗಳನ್ನು ಪರಿಶೀಲಿಸಿ ಆಯೋಗವು ಕೆಳಕಂಡಂತೆ ಆದೇಶ ಮಾಡಿದೆ.

"ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ) (ಸಾಮಾನ್ಯ) ನಿಯಮಗಳು 2001ರ ಅಡಿಯಲ್ಲಿ ನಿಯಮ 19 ಹಾಗೂ ತತ್ಸಂಬಂಧ ಅಧಿಕೃತ ಜ್ಞಾಪನ ಸಂಖ್ಯೆ: 398/2003-04 ಪಿಎಸ್‌ಸಿ ದಿನಾಂಕ: 14.07.1993 ರಲ್ಲಿ ಪ್ರದತ್ತವಾದ ಅಧಿಕಾರದ ಮೇರೆಗೆ ಆಪಾದಿತ ಅಭ್ಯರ್ಥಿ ಶ್ರೀ ಶ್ರೀಧರ್ ಆರ್. ಇವರಿಗೆ ಈ ಕೆಳಕಂಡ ದಂಡನೆಯನ್ನು ವಿಧಿಸಿದೆ".

ದಿನಾಂಕ: 20.12.2004ರಂದು ಆಯೋಗವು ನಡೆಸಿದ್ದ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ನಗರಾಭಿವೃದ್ಧಿ ಇಲಾಖೆಯಲ್ಲಿ ಕಿರಿಯ ಅಭಿಯಂತರರು (ವಿದ್ಯುತ್) ನೇಮಕಾತಿಗೆ ನೋಂದಣಿ ಸಂಖ್ಯೆ: 61329ರ ಅಡಿ ಅಭ್ಯರ್ಥಿಯಾಗಿದ್ದ ಶ್ರೀ ಶ್ರೀಧರ್ ಆರ್. ಇವರ ಅಭ್ಯರ್ಥಿತ್ವವನ್ನು ರದ್ದುಪಡಿಸಿದೆ.

**ಬಿ.ಎಸ್. ರಾಮಪ್ರಸಾದ್**

ಪಿ.ಆರ್.703

ಕಾರ್ಯದರ್ಶಿಗಳು, ಕರ್ನಾಟಕ ಲೋಕಸೇವಾ ಆಯೋಗ.

## ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳ ಕಾರ್ಯಾಲಯ, ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ ಇವರ ನಡವಳಿಕೆಗಳು

**ವಿಷಯ:** ಚಿತ್ರದುರ್ಗ ಜಿಲ್ಲೆಯ ವಿವಿಧ ರಾಜ್ಯ ಹೆದ್ದಾರಿ, ಜಿಲ್ಲಾ ಮುಖ್ಯ ರಸ್ತೆಗಳಲ್ಲಿ ಅಧಿಕ ಭಾರ ಹೊತ್ತು ಸಾಗುವ ಸಾಗಾಣಿಕೆ ವಾಹನಗಳ ಸಂಚಾರ ನಿರ್ಬಂಧಿಸುವ ಬಗ್ಗೆ.

**ಉಲ್ಲೇಖ :**
1. ಕಾರ್ಯಪಾಲಕ ಅಭಿಯಂತರರು, ಪಿ.ಡಬ್ಲ್ಯೂ.ಡಿ. ಚಿತ್ರದುರ್ಗ ಇವರ ಪತ್ರ ಸಂ. ಕಾಪಾಇಂ/ ಲೋಇ/ ಚಿವಿ/ ಸಇಂ/ ಅಧಿಕ ಭಾರದ ವಾಹನಗಳು/ 04-05/ 2876/ ದಿನಾಂಕ: 19.02.05.
2. ಸಭಾ ನಡವಳಿಕೆಗಳು ದಿನಾಂಕ: 18.01.2005, 17.02.2005 ಮತ್ತು 16.03.2005.
3. ಈ ಕಛೇರಿಯ ನಡವಳಿಕೆಗಳು ಸಂ.ಐ.ಎನ್.ಡಿ. ಸಿ.ಆರ್. 42/04-05, ದಿನಾಂಕ: 04.02.05.

**ಪ್ರಸ್ತಾವನೆ:**

ಚಿತ್ರದುರ್ಗ ಜಿಲ್ಲೆಯಲ್ಲಿ ಪ್ರಮುಖವಾಗಿ ಹೊಸದುರ್ಗ, ಹೊಳಲ್ಕೆರೆ ತಾಲ್ಲೂಕುಗಳಲ್ಲಿ ಮತ್ತು ಭಾಗಶಃ ಚಿತ್ರದುರ್ಗ ತಾಲ್ಲೂಕಿನಲ್ಲಿ ಮ್ಯಾಂಗನೀಸ್ ಅದಿರು ಸೇರಿದಂತೆ ವಿವಿಧ ರೀತಿಯ ಗಣಿಗಾರಿಕೆಗಳು ಇತ್ತೀಚಿನ ಒಂದೂವರೆ ವರ್ಷದಲ್ಲಿ ಅತ್ಯಂತ ಹೆಚ್ಚಿನ ಪ್ರಮಾಣದಲ್ಲಿ ನಡೆಯುತ್ತಿದ್ದು, ಗಣಿಗಾರಿಕೆ ಪ್ರದೇಶಗಳಿಂದ ಈ ಸರಕನ್ನು ವಾಹನಗಳ ಸಾಮರ್ಥ್ಯಕ್ಕಿಂತ ಹೆಚ್ಚಾಗಿ ತುಂಬಿಕೊಂಡು ಮಂಗಳೂರು ಕಡೆಗೆ ಸಾಗಾಣಿಕೆ ಮಾಡುತ್ತಿರುವುದರಿಂದ ಅಸಾಮಾನ್ಯ ಭಾರದ ಅಕ್ರಮ ಸಾಗಾಣಿಕೆಯಿಂದ ರಸ್ತೆಗಳು ಕುಸಿದು ಸಂಚಾರಕ್ಕೆ ಸಂಪೂರ್ಣವಾಗಿ ಅನರ್ಹವಾಗಿರುವುದರಿಂದ ಮತ್ತು ರಸ್ತೆಗಳಲ್ಲಿ ಬರುವ ಹಲವಾರು ಸೇತುವೆಗಳು ಶಿಥಿಲವಾಗಿರುವುದರಿಂದ ಯಾವುದೇ ಕ್ಷಣದಲ್ಲಿ ಸೇತುವೆಗಳು, ಮೋರಿಗಳು ಕುಸಿದು ಬೀಳುವ ಶಂಕೆಯನ್ನು ಹಲವಾರು ಸಂಘ ಸಂಸ್ಥೆಗಳು, ಸಾರ್ವಜನಿಕರು, ಗ್ರಾಮಸ್ಥರು ಅಲ್ಲದೇ ರೈತ ಸಂಘದ ಪ್ರತಿನಿಧಿಗಳು ಹಲವಾರು ಬಾರಿ ಈ ವಿಚಾರದಲ್ಲಿ ಪ್ರತಿಭಟನೆ ಮಾಡಿರುತ್ತಾರೆ.

ಶ್ರೀ ಬಿ.ಜಿ. ಗೋವಿಂದಪ್ಪ, ಮಾನ್ಯ ಶಾಸಕರು (ವಿಧಾನಸಭೆ), ಹೊಸದುರ್ಗ ಕ್ಷೇತ್ರ ಇವರೂ ಸಹ ಅಕ್ರಮ ಗಣಿಗಾರಿಕೆ ಮತ್ತು ಅಧಿಕ ಭಾರದ ಲಾರಿಗಳ ಓಡಾಟದ ಹಾಗೂ ಅದರಿಂದ ಉಂಟಾಗುತ್ತಿರುವ ರಸ್ತೆಗಳ ದುಸ್ಥಿತಿ ವಿರುದ್ಧ ಹಲವಾರು ಬಾರಿ ಪ್ರದರ್ಶನಗಳನ್ನು ಮಾಡಿ ತಮ್ಮ ವಿರೋಧವನ್ನು ವ್ಯಕ್ತಪಡಿಸಿರುತ್ತಾರೆ.

ಗಣಿಗಾರಿಕೆಯಿಂದ ಉತ್ಪತ್ತಿಯಾಗುವ ಖನಿಜಗಳನ್ನು ಸಾಮರ್ಥ್ಯಕ್ಕಿಂತ ಹೆಚ್ಚಿನ ಪ್ರಮಾಣದಲ್ಲಿ ಲೋಡ್ ಮಾಡಿಕೊಂಡು ಸಂಚರಿಸುವ ವಾಹನಗಳಿಂದ ಈ ಕೆಳಗಿನ ರಸ್ತೆಗಳು ಅಪಾಯಕರ ಸ್ಥಿತಿ ತಲುಪಿವೆ ಎಂದು ವಿವರಗಳನ್ನು ಕಾರ್ಯಪಾಲಕ ಅಭಿಯಂತರರು, ಪಿ.ಡಬ್ಲ್ಯೂ.ಡಿ. ಚಿತ್ರದುರ್ಗ ಇವರು ವರದಿ ಮಾಡಿ ಇಂತಹ ವಾಹನಗಳ ಸಂಚಾರವನ್ನು ನಿರ್ಬಂಧಿಸುವಂತೆ ಮನವಿ ಮಾಡಿರುತ್ತಾರೆ.

ಅವರು ತಮ್ಮ ಪತ್ರ ಸಂಖ್ಯೆ: ಕಾಪಾಇಂ/ ಲೋಇ/ ಚಿವಿ/ ಸಇಂ/ ಅಧಿಕ ಭಾರದ ವಾಹನಗಳು/ 04-05/2876 ದಿನಾಂಕ: 19.02.2005 ರಲ್ಲಿ ಈ ಕೆಳಕಂಡ ರಸ್ತೆ ಮತ್ತು ಸೇತುವೆಗಳು ಅಪಾಯ ಮಟ್ಟ ತಲುಪಿವೆ. ಅಲ್ಲದೆ ಈ ರಸ್ತೆಗಳು ಹಾಗೂ ಸೇತುವೆಗಳು ಅವುಗಳ ರಚನೆ ಹಾಗೂ ಈಗ ಇರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ 15 ಟನ್‌ಗಳ ಭಾರಕ್ಕಿಂತ ಹೆಚ್ಚಿನ ಭಾರವನ್ನು ತಡೆದುಕೊಳ್ಳುವ ಸಾಮರ್ಥ್ಯ ಹೊಂದಿಲ್ಲದಿರುವುದರಿಂದ ಮತ್ತು ತಾಂತ್ರಿಕ ದೃಷ್ಟಿಯಿಂದ ಇವುಗಳ ಮೇಲೆ ಅಧಿಕ ಭಾರದ ಲಾರಿಗಳ ಸಂಚಾರವನ್ನು ತಡೆಗಟ್ಟಬೇಕೆಂದು ತಮ್ಮ ವರದಿಯನ್ನು ಸಲ್ಲಿಸಿರುತ್ತಾರೆ.

## ಚಿತ್ರದುರ್ಗ ಜಿಲ್ಲೆಯಲ್ಲಿ ಅಧಿಕ ಭಾರ ಸಾಗಿಸುತ್ತಿರುವ ಮೈನಿಂಗ್ ಲಾರಿಗಳು ಸಂಚರಿಸುತ್ತಿರುವ ರಸ್ತೆಗಳ ವಿವರ

### ಚಿತ್ರದುರ್ಗ ಜಿಲ್ಲೆಯಲ್ಲಿ ನಡೆಯುತ್ತಿರುವ ಗಣಿಗಾರಿಕೆಯ ವಾಹನಗಳು ಸಂಚರಿಸುವ ರಸ್ತೆಗಳು:

| ಕ್ರ. ಸಂ. | ರಸ್ತೆಯ ಹೆಸರು | ರಸ್ತೆಯ ವರ್ಗ | ರಸ್ತೆ ಹಾದು ಹೋಗುವ ತಾಲ್ಲೂಕು | ಅಧಿಕ ಭಾರದ ವಾಹನಗಳು ಓಡಾಡುತ್ತಿರುವ ರಸ್ತೆಯ ಉದ್ದ ಕಿ.ಮೀ.ಗಳಲ್ಲಿ |
|---|---|---|---|---|
| 1. | ಹುಳಿಯಾರು-ಅನಗೋಡು ರಸ್ತೆ | ರಾಜ್ಯ ಹೆದ್ದಾರಿ | ಹೊಸದುರ್ಗ<br>ಹೊಳಲ್ಕೆರೆ | 46.20 (9.80 ರಿಂದ 56.00)<br>37 (56.00 ರಿಂದ 93.00) |
| 2. | ಕುಮಟ- ಕೊಡಮಡಗು ರಸ್ತೆ | ರಾಜ್ಯ ಹೆದ್ದಾರಿ | ಹೊಳಲ್ಕೆರೆ | 9.60 (237.00 ರಿಂದ 246.60) |
| 3. | ತರೀಕೆರೆ-ಹಿರಿಯೂರು- ವಿ.ವಿ. ಪುರ-ಧರ್ಮಪುರ ರಸ್ತೆ. | ರಾಜ್ಯ ಹೆದ್ದಾರಿ | ಹೊಸದುರ್ಗ | 43.40 (33.40 ರಿಂದ 76.80) |
| 4. | ಹಿರೇಬೆನ್ನೂರು-ಸಿರಿಗೆರೆ- ಸಾಸಲು ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಳಲ್ಕೆರೆ | 9.20 (12.40 ರಿಂದ 21.60) |
| 5. | ಅಮೃತಾಪುರ-ಮಾಡದಕೆರೆ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಳಲ್ಕೆರೆ<br>ಹೊಸದುರ್ಗ | 22.00 (0.00 ರಿಂದ 22.00)<br>11.60 (22.00 ರಿಂದ 33.60) |
| 6. | ಹಾಗಲಕೆರೆ-ಮತ್ತೋಡು-ಚಿಕ್ಕಬ್ಯಾಲದಕೆರೆ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಸದುರ್ಗ | 32.20 (0.00 ರಿಂದ 32.20) |
| 7. | ಹಾಗಲಕೆರೆ-ಬೆಲಗೂರು- ಮರವಂಜಿ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಸದುರ್ಗ | 16.00 (0.00 ರಿಂದ 16.00) |
| 8. | ಬೆಲಗೂರು-ತಿಮ್ಮಾಪುರ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಹೊಸದುರ್ಗ | 6.40 (0.00 ರಿಂದ 6.40) |

### ಬೇರೆ ಜಿಲ್ಲೆಗಳಲ್ಲಿ ನಡೆಯುತ್ತಿರುವ ಗಣಿಗಾರಿಕೆಯ ವಾಹನಗಳು ಸಂಚರಿಸುವ ರಸ್ತೆಗಳು

| | | | | |
|---|---|---|---|---|
| 1. | ಚಳ್ಳಕೆರೆ-ಮೈಲಾನಹಳ್ಳಿ- ಓಬಳಾಪುರ ರಸ್ತೆ | ಜಿಲ್ಲಾ ಮುಖ್ಯರಸ್ತೆ | ಚಳ್ಳಕೆರೆ | 5.40 (41.00 ರಿಂದ 46.40) |
| 2. | ಮೀರಾಸಾಬೀಹಳ್ಳಿ-ಜಾಜೂರು-ಓಬಳಾಪುರ ರಸ್ತೆ. | ಜಿಲ್ಲಾ ಮುಖ್ಯರಸ್ತೆ | ಚಳ್ಳಕೆರೆ | 33.60 (0.00 ರಿಂದ 33.60) |
| 3. | ಕುಮಟಾ-ಕೊಡಮಡುಗು ರಸ್ತೆ | ರಾಜ್ಯ ಹೆದ್ದಾರಿ | ಚಳ್ಳಕೆರೆ<br>ಚಿತ್ರದುರ್ಗ | 23.60 (310.60 ರಿಂದ 287.00)<br>14.60 (287.00 ರಿಂದ 272.40) |
| 4. | ಹುಳಿಯಾರು-ಅನಗೋಡು ರಸ್ತೆ | ರಾಜ್ಯ ಹೆದ್ದಾರಿ | ಹೊಳಲ್ಕೆರೆ<br>ಹೊಸದುರ್ಗ | 15.20 (71.20 ರಿಂದ 56.00)<br>15.00 (56.00 ರಿಂದ 41.00) |
| 5. | ತರೀಕೆರೆ-ಹೊಸದುರ್ಗ- ಹಿರಿಯೂರು-ವಿ.ವಿ. ಪುರ- ಹಿರಿಯೂರು-ಧರ್ಮಪುರ ರಸ್ತೆ | ರಾಜ್ಯ ಹೆದ್ದಾರಿ | ಹೊಸದುರ್ಗ | 16.00 (49.00 ರಿಂದ 33.00) |

ಕಾರ್ಯಪಾಲಕ ಅಭಿಯಂತರರು, ಪಿ.ಡಬ್ಲ್ಯೂ.ಡಿ., ಚಿತ್ರದುರ್ಗ ಇವರು ನೀಡಿರುವ ವಿವರಗಳನ್ನು ದಿನಾಂಕ: 16.03.05 ರಂದು ನಡೆದ ಸಭೆಯಲ್ಲಿ ಪೊಲೀಸ್ ಅಧೀಕ್ಷಕರು, ಉಪನಿರ್ದೇಶಕರು, ಗಣಿ ಮತ್ತು ಭೂ ವಿಜ್ಞಾನ ಇಲಾಖೆ, ಪ್ರಾದೇಶಿಕ ಸಾರಿಗೆ ಅಧಿಕಾರಿ, ಕಾರ್ಯಪಾಲಕ ಅಭಿಯಂತರರು, ಲೋಕೋಪಯೋಗಿ ಇಲಾಖೆ ಮತ್ತು ರಾಷ್ಟ್ರೀಯ ಹೆದ್ದಾರಿ ಪ್ರಾಧಿಕಾರ, ಚಿತ್ರದುರ್ಗ ಹಾಗೂ ತಹಶೀಲ್ದಾರ್, ಹೊಳಲ್ಕೆರೆ/ ಹೊಸದುರ್ಗ, ಇವರೆಲ್ಲರೊಂದಿಗೆ ಸುದೀರ್ಘವಾಗಿ ಚರ್ಚಿಸಲಾಯಿತು. ಮತ್ತು ಅಧಿಕ ಭಾರದ ಅಕ್ರಮ ಸಾಗಾಣಿಕೆಯ ವಾಹನಗಳ ಸಂಚಾರದಿಂದ ರಸ್ತೆಗಳು ಮತ್ತು ಸೇತುವೆಗಳು ಈಗ ಸಂಪೂರ್ಣ ಹಾಳಾಗಿರುವುದು ಮತ್ತು ಶಿಥಿಲಗೊಂಡಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮುಂದೆ ಯಾವುದೇ ಕ್ಷಣದಲ್ಲಿ ಸಂಭವಿಸಬಹುದಾದ ಭಾರಿ ಅಪಘಾತಗಳನ್ನು ತಡೆಯಲು ಮತ್ತು ಈಗಿನ ರಸ್ತೆಗಳು ಮತ್ತು ಸೇತುವೆಗಳ ಸ್ಥಿತಿಯನ್ನು ಇನ್ನೂ ಹೆಚ್ಚಿಗೆ ಹಾಳಾಗದಂತೆ ತಡೆಯುವ ದೃಷ್ಟಿಯಿಂದ ಈ ಕೆಳಗಿನಂತೆ ವಾಹನ ಸಂಚಾರ ನಿಷೇಧ ಆದೇಶವನ್ನು ಹೊರಡಿಸಬೇಕೆಂದು ತೀರ್ಮಾನಿಸಲಾಯಿತು. ಈ ತೀರ್ಮಾನದ ಹಿನ್ನೆಲೆಯಲ್ಲಿ ಈ ಕೆಳಕಂಡ ಆದೇಶವನ್ನು ತಕ್ಷಣದಿಂದ ಜಾರಿಗೆ ಬರುವಂತೆ ಹೊರಡಿಸಲಾಗಿದೆ.

### ಆದೇಶ ಸಂಖ್ಯೆ: ಐ.ಎನ್.ಡಿ.ಸಿಆರ್.42/ 2004-05, ದಿನಾಂಕ: 17ನೇ ಮಾರ್ಚ್, 2005

ಕೇಂದ್ರ ಮೋಟಾರು ವಾಹನಗಳ ಕಾಯ್ದೆ 1988ರ ಕಲಂ 115 ಹಾಗೂ ಕರ್ನಾಟಕ ಮೋಟಾರು ವಾಹನಗಳ ನಿಯಮಾವಳಿಗಳು 1989ರ ನಿಯಮ 221(ಎ)(5) ಹಾಗೂ ಕರ್ನಾಟಕ ರಾಜ್ಯ ಹೆದ್ದಾರಿ ಕಾಯ್ದೆ 1964ರ ಕಲಂ 51 ರಲ್ಲಿ ಪ್ರದತ್ತವಾಗಿರುವ ಅಧಿಕಾರವನ್ನು ಚಲಾಯಿಸಿ ಎಸ್.ಆರ್. ಉಮಾಶಂಕರ್, ಭಾ.ಆ.ಸೇ. ಜಿಲ್ಲಾ ದಂಡಾಧಿಕಾರಿಗಳು ಮತ್ತು ಜಿಲ್ಲಾಧಿಕಾರಿಗಳು, ಚಿತ್ರದುರ್ಗ ಜಿಲ್ಲೆ ಆದ ನಾನು ಈ ಕೆಳಗಿನ ಷೆಡ್ಯೂಲ್‌ನಲ್ಲಿ ತೋರಿಸಿರುವಂತೆ ಚಿತ್ರದುರ್ಗ ಜಿಲ್ಲೆಯ ವ್ಯಾಪ್ತಿಯ ಒಳಗಡೆ ವಿವಿಧ ರಸ್ತೆಗಳಲ್ಲಿ ಸಂಚರಿಸುವ ವಾಹನಗಳಿಗೆ ಸಂಬಂಧಿಸಿದಂತೆ ಪೂರ್ಣ ನಿಷೇಧ ಮತ್ತು ನಿರ್ಬಂಧವನ್ನು ಆಯಾ ರಸ್ತೆಗಳ ಪರಿಸ್ಥಿತಿಗೆ ಅನುಗುಣವಾಗಿ ಮುಂದಿನ ಆದೇಶದವರೆಗೆ ದಿನಾಂಕ: 25.03.2005 ರಿಂದ ಜಾರಿಗೆ ಬರುವಂತೆ ಘೋಷಿಸಿರುತ್ತೇನೆ.

## ಷೆಡ್ಯೂಲ್-1

ಕೆಳಗಿನ ರಸ್ತೆಗಳಲ್ಲಿ ಅವುಗಳ ಎದುರಿಗೆ ತೋರಿಸಿರುವ ಭಾಗಗಳಲ್ಲಿ ಅದಿರು ತುಂಬಿದ ಲಾರಿಗಳ ಓಡಾಟವನ್ನು ಸಂಪೂರ್ಣವಾಗಿ ನಿಷೇಧಿಸಲಾಗಿದೆ.

| ಕ್ರ. ಸಂ. | ರಸ್ತೆಯ ವಿವರ | ರಸ್ತೆಯ ವರ್ಗೀಕರಣ | ಎಲ್ಲಿಂದ ಎಲ್ಲಿಗೆ ಮತ್ತು ಒಟ್ಟು ಉದ್ದ ಕಿ.ಮೀ. |
|---|---|---|---|
| 1. | ಶ್ರೀರಂಗಪಟ್ಟಣ-ಬೀದರ್‌ರಸ್ತೆ | ರಾಜ್ಯಹೆದ್ದಾರಿ | 153.20 (162.70 ರಿಂದ 315.90) |
| 2. | ಹಿರಿಯೂರು-ವಿ.ವಿ. ಪುರರಸ್ತೆ | ರಾಜ್ಯಹೆದ್ದಾರಿ | 22.20 (76.80 ರಿಂದ 99.00) |
| 3. | ಹೊಸದುರ್ಗ-ಕೆಲ್ಲೋಡುರಸ್ತೆ | ರಾಜ್ಯಹೆದ್ದಾರಿ | 31.20 (9.80 ರಿಂದ 41.00) |
| 4. | ಚಿತ್ರದುರ್ಗ-ಚಳ್ಳಕೆರೆ- ಓಬಳಾಪುರರಸ್ತೆ | ರಾಜ್ಯಹೆದ್ದಾರಿ | 76.80 (272.00 ರಿಂದ 348.80) |

## ಷೆಡ್ಯೂಲ್-2

ಈ ಕೆಳಕಂಡ ರಸ್ತೆಗಳಲ್ಲಿ 15 ಟನ್‌ಗೂ ಮೇಲ್ಪಟ್ಟು ಭಾರವಿರುವ ಸರಕು ಸಾಗಾಣಿಕೆ ವಾಹನಗಳ ಸಂಚಾರವನ್ನು ನಿರ್ಬಂಧಿಸಲಾಗಿದೆ. ಅದರಂತೆ 2 ಆ್ಯಕ್ಸಲ್ (ಅಚ್ಚು)ಗಳಿಗಿಂತ ಹೆಚ್ಚಿನ ಅಚ್ಚುಗಳಿಂದ ವಾಹನಗಳ ಸಂಚಾರವನ್ನು ಸಂಪೂರ್ಣವಾಗಿ ನಿರ್ಬಂಧಿಸಲಾಗಿದೆ.

| ಕ್ರ. ಸಂ. | ರಸ್ತೆಯ ವಿವರ | ರಸ್ತೆಯ ವರ್ಗೀಕರಣ | ಎಲ್ಲಿಂದ ಎಲ್ಲಿಗೆ ಮತ್ತು ಒಟ್ಟು ಉದ್ದ ಕಿ.ಮೀ. |
|---|---|---|---|
| 1. | ಹುಳಿಯಾರು-ಅನಗೋಡುರಸ್ತೆ | ರಾಜ್ಯಹೆದ್ದಾರಿ | 46.20 (9.80 ರಿಂದ 56.00)<br>37.00 (56.00 ರಿಂದ 93.00) |
| 2. | ಕುಮಟ-ಕೊಡಮಡಗುಳು ರಸ್ತೆ | ರಾಜ್ಯಹೆದ್ದಾರಿ | 9.60 (237.00 ರಿಂದ 246.60) |
| 3. | ತರೀಕೆರೆ-ಹಿರಿಯೂರು- ವಿ.ವಿ.ಪುರ-ಧರ್ಮಪುರ ರಸ್ತೆ | ರಾಜ್ಯಹೆದ್ದಾರಿ | 43.40 (33.40 ರಿಂದ 76.80) |
| 4. | ಹಿರೇಬೆನ್ನೂರು-ಸಿರಿಗೆರೆ-ಸಾಸಲು ರಸ್ತೆ | ಜಿಲ್ಲಾ ಮುಖ್ಯರಸ್ತೆ | 9.20 (12.40 ರಿಂದ 21.60) |
| 5. | ಅಮೃತಾಪುರ-ಮಾಡದಕೆರೆರಸ್ತೆ | ಜಿಲ್ಲಾ ಮುಖ್ಯರಸ್ತೆ | 22.00 (00 ರಿಂದ 22.00)<br>11.60 (22.00 ರಿಂದ 33.60) |
| 6. | ಹಾಗಲಕೆರೆ-ಮತ್ತೋಡು- ಚಿಕ್ಕಬ್ಯಾಲದಕೆರೆರಸ್ತೆ | ಜಿಲ್ಲಾ ಮುಖ್ಯರಸ್ತೆ | 32.20 (0.00 ರಿಂದ 32.20) |
| 7. | ಹಾಗಲಕೆರೆ-ಬೆಲಗೂರು- ಮರವಂಜಿ ರಸ್ತೆ | ಜಿಲ್ಲಾ ಮುಖ್ಯರಸ್ತೆ | 16.00 (0.00 ರಿಂದ 16.00) |
| 8. | ಬೆಲಗೂರು-ತಿಮ್ಮಾಪುರ ರಸ್ತೆ | ಜಿಲ್ಲಾ ಮುಖ್ಯರಸ್ತೆ | 6.40 (0.00 ರಿಂದ 6.40) |
| 9. | ಚಳ್ಳಕೆರೆ-ಮೈಲಾನಹಳ್ಳಿ-ಓಬಳಾಪುರ ರಸ್ತೆ | ಜಿಲ್ಲಾ ಮುಖ್ಯರಸ್ತೆ | 5.40 (41.00 ರಿಂದ 46.40) |
| 10. | ಮೀರಾಸಾಬೀಹಳ್ಳಿ-ಜಾಜೂರು- ಓಬಳಾಪುರ ರಸ್ತೆ | ಜಿಲ್ಲಾ ಮುಖ್ಯರಸ್ತೆ | 33.60 (0.00 ರಿಂದ 33.60) |
| 11. | ಕುಮಟಾ-ಕೊಡಮಡುಗು ರಸ್ತೆ | ರಾಜ್ಯಹೆದ್ದಾರಿ | 23.60 (310.60 ರಿಂದ 287.00)<br>14.60 (287.00 ರಿಂದ 72.40) |
| 12. | ಹುಳಿಯಾರು-ಆನಗೋಡುರಸ್ತೆ | ರಾಜ್ಯಹೆದ್ದಾರಿ | 15.20 (71.20 ರಿಂದ 56.00)<br>15.00 (56.00 ರಿಂದ 41.00) |
| 13. | ತರೀಕೆರೆ-ಹೊಸದುರ್ಗ- ಹಿರಿಯೂರು-ವಿ.ವಿ. ಪುರ-ಹಿರಿಯೂರು-ಧರ್ಮಾಪುರ ರಸ್ತೆ | ರಾಜ್ಯಹೆದ್ದಾರಿ | 16.00 (49.00 ರಿಂದ 33.00) |

**ಎಸ್.ಆರ್. ಉಮಾಶಂಕರ್**

ಪಿ.ಆರ್.704

ಜಿಲ್ಲಾಧಿಕಾರಿಗಳು ಹಾಗೂ ಜಿಲ್ಲಾ ದಂಡಾಧಿಕಾರಿಗಳು,
ಚಿತ್ರದುರ್ಗ ಜಿಲ್ಲೆ, ಚಿತ್ರದುರ್ಗ.

## ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಇವರ ನ್ಯಾಯಾಲಯದಲ್ಲಿ

**ನಂ.132. 2ನೇ ಮಹಡಿ, ಕೆಂಗಲ್ ಹನುಮಂತಯ್ಯ ರಸ್ತೆ, ಬೆಂಗಳೂರು-560 027**

**ವ್ಯಾಜ್ಯ ಸಂಖ್ಯೆ: ಜೆ.ಆರ್.ಡಿ/ ಯು.ಬಿ.ಎಫ್./ ಎಸ್.ಯುಆರ್/ 08/ 2004-05**

**ಅರ್ಜಿದಾರರು:**

1. ಲಕ್ಷ್ಮೇಶ್ವರ್ ಅರ್ಬನ್ ಸಹಕಾರ ಕ್ರೆಡಿಟ್ ಬ್ಯಾಂಕ್ ಲಿ., ಲಕ್ಷ್ಮೇಶ್ವರ, ತಾಲ್ಲೂಕು ಶಿರಹಟ್ಟಿ, ಗದಗ ಜಿಲ್ಲೆ.

ವಿರುದ್ಧ

**ಪ್ರತಿವಾದಿಗಳು:**

1. ಶ್ರೀ ಸಂಗಮೇಶ್ ಶಂಕ್ರಪ್ಪ ಯಳಮಲೆ, ಅರ್ಜಿದಾರ ಬ್ಯಾಂಕಿನ ವಸೂಲಾಧಿಕಾರಿ ಮತ್ತು ಮಾಜಿ ವ್ಯವಸ್ಥಾಪಕರು, ಸಾ: ಲಕ್ಷ್ಮೇಶ್ವರ ಬಸ್ತೀಬಣ, ಶಿರಹಟ್ಟಿ ತಾಲ್ಲೂಕು, ಗದಗ ಜಿಲ್ಲೆ.

## 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ರೀತ್ಯ ಸ್ಥಿರಾಸ್ತಿಯನ್ನು ತೀರ್ಪು ಪೂರ್ವ ಜಪ್ತಿ ಮಾಡಿರುವ ಬಗ್ಗೆ ನೋಟೀಸು

1. ವಾದಿಯವರು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 69ರನ್ವಯ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಪ್ರತಿವಾದಿಯಿಂದ ಒಟ್ಟು ರೂ.62,87,000.00 (ಅರವತ್ತೆರಡು ಲಕ್ಷದ ಎಂಬತ್ತೇಳು ಸಾವಿರ ರೂಪಾಯಿಗಳು ಮಾತ್ರ) ಗಳಷ್ಟು ಮೊತ್ತದ ಹಣ ಬ್ಯಾಂಕಿಗೆ ನಷ್ಟ ಉಂಟು ಮಾಡಿರುವುದನ್ನು ಕಲಂ 64ರ ವಿಚಾರಣೆಯಲ್ಲಿ ದೃಢಪಟ್ಟಿದ್ದರಿಂದ ಸದರಿ ಹಣ ಸಂಪೂರ್ಣ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 19ರ ದರದಂತೆ ಆಗುವ ಬಡ್ಡಿ ಹಾಗೂ ಕೋರ್ಟ್ ಖರ್ಚಿನೊಂದಿಗೆ ಪ್ರತಿವಾದಿಯ ಸ್ಥಿರ ಆಸ್ತಿಗಳನ್ನು ಮಾರಾಟ ಮಾಡಿ ವಸೂಲು ಮಾಡಿಸಲು ಆದೇಶ ನೀಡಬೇಕೆಂದು ದಾವಾ ಅರ್ಜಿಯಲ್ಲಿ ಕೋರಿರುತ್ತಾರೆ.

2. ವಾದಿಯು ಈ ದಾವಾ ಅರ್ಜಿಯೊಂದಿಗೆ 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103ರನ್ವಯ ಅರ್ಜಿಯನ್ನು ಸಲ್ಲಿಸಿ ಪ್ರತಿವಾದಿಯ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಯನ್ನು ಮೇಲ್ಕಂಡ ದಾವಾ ಅರ್ಜಿಯಲ್ಲಿ ನೀಡಲಿರುವ ತೀರ್ಪಿಗೆ ಪೂರ್ವ ಜಪ್ತಿ ಮಾಡಿ (Attachment Before Judgement) ಆದೇಶ ನೀಡುವಂತೆ ಕೋರಿರುತ್ತಾರೆ. ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ವತ್ತನ್ನು ಸದರಿಯವರು ವಾದಿ ಬ್ಯಾಂಕಿಗೆ ವಂಚನೆ ಮಾಡುವ ದುರುದ್ದೇಶದಿಂದ ಮಾರಾಟ/ ಪರಬಾರೆ ಮಾಡಲು ಉದ್ದೇಶಿಸಿದ್ದು, ಇದನ್ನು ತಡೆಯದಿದ್ದಲ್ಲಿ ವಾದಿಯು ಪ್ರತಿವಾದಿಗಳ ವಿರುದ್ಧ ದಾಖಲಿಸಿರುವ ದಾವಾ ಅರ್ಜಿಯಲ್ಲಿ ಈ ನ್ಯಾಯಾಲಯವು ಅವಾರ್ಡ್ ಅಥವಾ ಡಿಕ್ರಿ ನೀಡಿದರೂ ಸದರಿ ಅವಾರ್ಡ್/ ಡಿಕ್ರಿ ಅನ್ವಯ ಪ್ರತಿವಾದಿಗಳಿಂದ ವಾದಿಗೆ ಬರಬೇಕಾದ ಮೊಬಲಗನ್ನು ಪ್ರತಿವಾದಿಗಳಿಂದ ವಸೂಲಿ ಮಾಡಲು ಯಾವುದೇ ರಹವಿಲ್ಲದೇ ಇರುವ ಪರಿಸ್ಥಿತಿ ನಿರ್ಮಾಣವಾಗುವ ಸಾಧ್ಯತೆ ಇದೆ ಎಂದು ವಾದಿಯವರು ಈ ನ್ಯಾಯಾಲಯದ ಗಮನಕ್ಕೆ ತಂದಿರುತ್ತಾರೆ.

3. ವಾದಿಯ ದಾವಾ ಅರ್ಜಿ ಹಾಗೂ ಕಲಂ 103ರನ್ವಯ ಸಲ್ಲಿಸಿರುವ ಅರ್ಜಿಗಳನ್ನು ಪರಿಶೀಲಿಸಲಾಗಿ ವಾದಿಯ ಕಲಂ 103ರ ಅರ್ಜಿಯಲ್ಲಿ ನಮೂದಿಸಿರುವ ಅಂಶಗಳು ನಿಜವೆಂಬುದು ಮೇಲ್ನೋಟಕ್ಕೆ ಕಂಡು ಬರುತ್ತದೆ. ಪ್ರತಿವಾದಿಯು ಈ ಕೆಳಗೆ ಶೆಡ್ಯೂಲ್‌ನಲ್ಲಿ ಕಾಣಿಸಿರುವ ಸ್ಥಿರ ಸ್ವತ್ತನ್ನು ಮಾರಾಟ ಮಾಡದಂತೆ ಹಾಗೂ ಪರಭಾರೆ ಮಾಡದಂತೆ ತಡೆಯದೇ ಇದ್ದಲ್ಲಿ ಈ ದಾವೆಯಲ್ಲಿ ನೀಡಲಿರುವ ಅವಾರ್ಡ್/ ಡಿಕ್ರಿಯನ್ನು ವಾದಿಯು ಜಾರಿಗೊಳಿಸಲು ಸಾಧ್ಯವಾಗದಂತಹ ಪರಿಸ್ಥಿತಿ ನಿರ್ಮಾಣವಾಗಲಿದೆ ಎಂಬ ಅಂಶವು ಈ ನ್ಯಾಯಾಲಯಕ್ಕೆ ಸಂಪೂರ್ಣವಾಗಿ ಮನವರಿಕೆಯಾಗಿರುತ್ತದೆ.

4. ಮೇಲೆ ನಮೂದಿಸಿರುವ ಅಂಶಗಳನ್ನು ಪರಿಗಣಿಸಿ ಈ ಕೆಳಕಂಡ ಆದೇಶವನ್ನು ಹೊರಡಿಸಲಾಗಿದೆ.

**ಆದೇಶ**

ಮೇಲೆ ವಿವರಿಸಿರುವ ಪರಿಸ್ಥಿತಿಯ ಹಿನ್ನೆಲೆಯಲ್ಲಿ ಮತ್ತು 1959ರ ಕರ್ನಾಟಕ ಸಹಕಾರ ಸಂಘಗಳ ಕಾಯ್ದೆಯ ಕಲಂ 103 ಹಾಗೂ ಸರ್ಕಾರದ ಅಧಿಸೂಚನೆ ಕ್ರಮ ಸಂಖ್ಯೆ ಸಿಎಂಡಬ್ಲ್ಯೂ 191 ಸಿಎಲ್ಎಂ 2004 (ಭಾಗ-1) ದಿನಾಂಕ: 02.02.2005 ರನ್ವಯ ದತ್ತವಾಗಿರುವ ಅಧಿಕಾರವನ್ನು ಚಲಾಯಿಸುತ್ತಾ ಆರ್.ಎಂ. ನಟರಾಜ್, ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441) ದಾವಾ ಪಂಚಾಯ್ತಿ ನ್ಯಾಯಾಲಯ, ಕರ್ನಾಟಕ ರಾಜ್ಯ ಸಹಕಾರ ಪಟ್ಟಣ ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು ಆದ ನಾನು ಪ್ರತಿವಾದಿ ಹೆಸರಿನಲ್ಲಿರುವ ಈ ಕೆಳಗೆ ಶೆಡ್ಯೂಲಿನಲ್ಲಿ ಕಾಣಿಸಿರುವ ಸ್ಥಿರ ಆಸ್ತಿಯನ್ನು ಈ ಕೆಳಕಂಡ ಷರತ್ತಿಗೊಳಪಟ್ಟು ತೀರ್ಪಿಗೆ ಪೂರ್ವ ಜಪ್ತಿ ಮಾಡಿ ಈ ಮೂಲಕ ಆದೇಶ ನೀಡಿರುತ್ತೇನೆ.

ಪ್ರತಿವಾದಿಯು ಒಂದು ವೇಳೆ ಈ ತೀರ್ಪಿಗೆ ಪೂರ್ವ ಜಪ್ತಿ ಆದೇಶವನ್ನು ಹಿಂದಕ್ಕೆ ಪಡೆಯಲು ಇಚ್ಛಿಸಿದಲ್ಲಿ ಒಟ್ಟು ರೂ.62,87,000.00 (ಅರವತ್ತೆರಡು ಲಕ್ಷದ ಎಂಬತ್ತೇಳು ಸಾವಿರ ರೂಪಾಯಿಗಳು ಮಾತ್ರ) ಗಳನ್ನು ಬ್ಯಾಂಕಿಗೆ ಉಂಟು ಮಾಡಿದ ನಷ್ಟ ಸಂಪೂರ್ಣ ಪಾವತಿಯಾಗುವ ದಿನಾಂಕದವರೆಗೆ ಶೇಕಡಾ 19ರ ದರದಂತೆ ಆಗುವ ಬಡ್ಡಿ ಹಾಗೂ ಇತರೆ ಖರ್ಚಿನೊಂದಿಗೆ ವಾದಿಯ ಬ್ಯಾಂಕಿನಲ್ಲಿ ಅಮಾನತ್ತು ಖಾತೆಗೆ ದಿನಾಂಕ: 25.05.2005ರ ಒಳಗಾಗಿ ಜಮಾಮಾಡಿ, ಹೀಗೆ ಜಮಾಮಾಡಿದ ಅಧಿಕೃತ ಚಲನ್/ ರಸೀದಿಯನ್ನು ಈ ನ್ಯಾಯಾಲಯಕ್ಕೆ ಹಾಜರು ಪಡಿಸುವಂತೆ ಪ್ರತಿವಾದಿಗೆ ಈ ಮೂಲಕ ನಿರ್ದೇಶಿಸಲಾಗಿದೆ.

ಒಂದು ವೇಳೆ ಪ್ರತಿವಾದಿಯು ಮೇಲೆ ತಿಳಿಸಿದಂತೆ ನಿಗದಿ ಪಡಿಸಿದ ದಿನಾಂಕದೊಳಗಾಗಿ ನಗದು ಭದ್ರತೆಯನ್ನು ನೀಡಲು ವಿಫಲರಾದಲ್ಲಿ ಷರತ್ತಿಗೊಳಪಟ್ಟು ನೀಡಲಾಗಿರುವ ಈ ತೀರ್ಪು ಪೂರ್ವ ಜಪ್ತಿ ಆದೇಶವನ್ನು ಸ್ಥಿರೀಕರಿಸಲಾಗುವುದು.

ಈ ಕೆಳಗಿನ ಶೆಡ್ಯೂಲ್‌ನಲ್ಲಿ ನಮೂದಿಸಿರುವ ಸ್ಥಿರ ಆಸ್ತಿಯನ್ನು ಖರೀದಿಸುವಲ್ಲಿ ಆಸಕ್ತಿ ಹೊಂದಿರುವ ವ್ಯಕ್ತಿಗಳಿಗೆ ಈ ಮೂಲಕ ನೋಟೀಸು ನೀಡಲಾಗಿದ್ದು, ಇವರುಗಳು ಈ ಬಗ್ಗೆ ತೆಗೆದುಕೊಳ್ಳಬಹುದಾದ ಕ್ರಮಗಳು ಈ ತೀರ್ಪು ಪೂರ್ವ ಜಪ್ತಿ ಆದೇಶಕ್ಕೆ ಒಳಪಡುತ್ತವೆ ಎಂದು ಈ ಮೂಲಕ ತಿಳಿಯಪಡಿಸಲಾಗಿದೆ.

**ಶೆಡ್ಯೂಲ್ ಸ್ಥಿರಾಸ್ತಿಯ ವಿವರ**

1. ಶಿರಹಟ್ಟಿ ತಾಲ್ಲೂಕು, ಲಕ್ಷ್ಮೇಶ್ವರ ಗ್ರಾಮದಲ್ಲಿರುವ ವಾಸದ ಮನೆ ಸಿಟಿ ಸರ್ವೆ ನಂ.3878 ಈ ಸ್ವತ್ತಿನ ಚಕ್ಕುಬಂದಿ:

| | | |
|---|---|---|
| ಪೂರ್ವಕ್ಕೆ | : | ಅಂಕಲಕೋಟಿಯವರ ಮನೆ |
| ಪಶ್ಚಿಮಕ್ಕೆ | : | ಡಾ: ಮಲ್ಲಾಡದ ಆಸ್ಪತ್ರೆ |
| ಉತ್ತರಕ್ಕೆ | : | ರಸ್ತೆ |
| ದಕ್ಷಿಣಕ್ಕೆ | : | ಲಕ್ಷ್ಮೇಶ್ವರ ಪಟ್ಟಣ ಸಹಕಾರ ಬ್ಯಾಂಕ್ ಕಟ್ಟಡ |

2. ಶಿರಹಟ್ಟಿ ತಾಲ್ಲೂಕು, ಲಕ್ಷ್ಮೇಶ್ವರ ಹೋಬಳಿ, ದೊಡ್ಡೂರು ಗ್ರಾಮದಲ್ಲಿರುವ ಸರ್ವೆ ನಂ.37ರಲ್ಲಿರುವ (1) ಹಿಸ್ಸಾ ನಂ.3ರಲ್ಲಿ 03 ಎಕರೆ 09 ಗುಂಟೆ ಜಮೀನು, (2) ಹಿಸ್ಸಾ ನಂ.4ರಲ್ಲಿ 03 ಎಕರೆ 11 ಗುಂಟೆ ಜಮೀನು ಮತ್ತು (3) ಹಿಸ್ಸಾ ನಂ.5ರಲ್ಲಿ 03 ಎಕರೆ 11 ಗುಂಟೆ ಜಮೀನು.

ಈ ಆದೇಶವನ್ನು ನನ್ನ ಸ್ವ ಸಹಿ ಹಾಗೂ ನ್ಯಾಯಾಲಯದ ಮುದ್ರೆಯೊಂದಿಗೆ ದಿನಾಂಕ: 02.05.2005ರಂದು ನೀಡಿರುತ್ತೇನೆ.

ಸಹಕಾರ ಸಂಘಗಳ ಜಂಟಿ ನಿಬಂಧಕರು (ನಿ.441)
ದಾವಾ ಪಂಚಾಯ್ತಿ ನ್ಯಾಯಾಲಯ,
ಕ.ರಾ.ಸ.ಪ. ಬ್ಯಾಂಕುಗಳ ಮಹಾಮಂಡಳ ನಿ., ಬೆಂಗಳೂರು.

ಪಿ.ಆರ್.705

**ಜಿಲ್ಲಾಧಿಕಾರಿಗಳ ಕಛೇರಿ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು**

**ನಂ.ನಅಕೋ. ಸಿಆರ್.33:04-05, ದಿನಾಂಕ: 28ನೇ ಏಪ್ರಿಲ್, 2005**

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 107 ಗುಡಿಸಲುಗಳಿದ್ದು, 500 ಜನ ಸಂಖ್ಯೆಯಿಂದ ಕೂಡಿರುತ್ತದೆ. ಈ ಕೊಳಚೆ ಪ್ರದೇಶವು ಮೂಲಭೂತ ಸೌಕರ್ಯಗಳಿಂದ ವಂಚಿತವಾದ ಜಾಗದಲ್ಲಿ ಜನಸಂದಣಿ, ಮಾಲಿನ್ಯ ಅನಾರೋಗ್ಯ ವಾತಾವರಣದಿಂದ ಕೂಡಿರುತ್ತದೆಂತಲೂ, ಸದರಿ ಪ್ರದೇಶಕ್ಕೆ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಶೌಚಗೃಹ ಇತ್ಯಾದಿಗಳ ಸೌಕರ್ಯಗಳ ಅವಶ್ಯಕತೆ ಇರುವುದಾಗಿ, ಸಂಬಂಧಪಟ್ಟ ನಗರಸಭೆಯಿಂದ ಸದರಿ ಪ್ರದೇಶಕ್ಕೆ ಅಲ್ಪಸ್ವಲ್ಪ ಸೌಕರ್ಯಗಳನ್ನು ಮಾತ್ರ ನೀಡಲಾಗಿದೆಯೆಂತಲೂ ಹಾಗೂ ಸದರಿ ಪ್ರದೇಶದ ನಿವಾಸಿಗಳು 15 ವರ್ಷಗಳಿಂದ ಅಲ್ಲಿಯೇ ವಾಸವಾಗಿರುತ್ತಾರೆಂತಲೂ ಹಾಗೂ ಈ ಪ್ರದೇಶದ ನಿವಾಸಿಗಳ ಹೆಸರು 2000ದ ವಿಧಾನ ಸಭಾ ಮತದಾರರ ಪಟ್ಟಿಯಲ್ಲಿ ಕಂಡುಬಂದಿರುತ್ತದೆಯಾಗಿ ಸ್ಥಳ ತನಿಖೆಯಿಂದ ತಿಳಿದು ಬಂದಿದೆ ಎಂದು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯ ಆಯುಕ್ತರ ಪತ್ರ ಸಂಖ್ಯೆ: ಕಕೊನಿಮ: ರೆ.ಸಿ.ಘೋ.4:04-05:985ರಲ್ಲಿ ಶಿಫಾರಸ್ಸು ಮಾಡಿರುತ್ತಾರೆ. ಅಲ್ಲದೆ, ಈ ಷೆಡ್ಯೂಲ್ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸುವ ಬಗ್ಗೆ ದಿನಾಂಕ: 26.03.2005ರ ಸಭೆಯಲ್ಲಿ ಮಂಡಿಸಿ ತೀರ್ಮಾನ ಕೈಗೊಳ್ಳಲಾಯಿತು

ಎಂದು ಕರ್ನಾಟಕ ಕೊಳಚೆ ನಿರ್ಮೂಲನಾ ಮಂಡಳಿಯವರು ಸಭಾ ನಡವಳಿಯನ್ನು ಸಲ್ಲಿಸಿರುತ್ತಾರೆ. ರಾಮನಗರಂ ತಹಶೀಲ್ದಾರ್ ರವರು ಸಹ ಸದರಿ ಪ್ರದೇಶಕ್ಕೆ ಮೂಲಭೂತ ಅವಶ್ಯಕತೆಗಳ ಅಗತ್ಯವಿರುವುದಾಗಿ ಸದರಿ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸಲು ಶಿಫಾರಸ್ಸು ಮಾಡಿ ಆರ್.ಆರ್.ಟಿ. ಸಿಆರ್.1898:04-05 ದಿನಾಂಕ: 13.04.2005ರಂತೆ ಪತ್ರ ಬರೆದಿರುತ್ತಾರೆ.

ಆದ್ದರಿಂದ, ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ನನಇ 49 ಎಂಸಿಎಸ್ 85 ದಿನಾಂಕ: 17.04.1986ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರಂ ನಗರಸಭೆಯ ವ್ಯಾಪ್ತಿಯ ಈ ಕೆಳಗೆ ಬರುವ ಷೆಡ್ಯೂಲ್ ಸ್ವತ್ತನ್ನು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಲಾಗಿದೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳಿಗೆ ಅಥವಾ ಆಯುಕ್ತರು, ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿ, ನಂ.55, ರಿಸ್‌ಲ್ದಾರ್ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು-560 020 ರವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸಗಳವರೆವಿಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲವೆಂದು ತಿಳಿಸಲಾಗಿದೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಕೊಳಚೆ ಪ್ರದೇಶದ ಹೆಸರು | ಸ್ವತ್ತಿನ ಮಾಲಿಕರ ಹೆಸರು | ಸ.ನಂ. | ವಿಸ್ತೀರ್ಣ |
|---|---|---|---|---|
| 1. | ಕೋಡಿಪುರ | ಸರ್ಕಾರಿ | ಸರ್ವೆ ಇಲಾಖಾ ದಾಖಲೆಯಂತೆ ನಂ. ಇಲ್ಲದ ಹದ್ದಿನಗಿಡ್ಡನಹಳ್ಳಿ (ಬೋಳಪ್ಪನಹಳ್ಳಿ ಗಡಿಯಲ್ಲಿದೆ) | 2-24 |

**ಚೆಕ್ಕುಬಂದಿ**

ಪೂರ್ವಕ್ಕೆ : ರಸ್ತೆ
ಪಶ್ಚಿಮಕ್ಕೆ : ಹಳ್ಳಿ
ಉತ್ತರಕ್ಕೆ : ಖಾಸಗಿ ಹಿಡುವಳಿ ಜಮೀನು
ದಕ್ಷಿಣಕ್ಕೆ : ಸರ್ಕಾರಿ ಕೋಡಿಹಳ್ಳಿ.

ಬಿ.ಪಿ. ಕನಿರಾಂ
ಪಿ.ಆರ್.706 ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಬೆಂಗಳೂರು ಗ್ರಾಮಾಂತರ ಜಿಲ್ಲೆ, ಬೆಂಗಳೂರು

### ಪ್ರಾರಂಭಿಕ ಅಧಿಸೂಚನೆ

### ನಂ.ನಅಕೋ. ಸಿಆರ್.34:2004-05, ದಿನಾಂಕ: 28ನೇ ಏಪ್ರಿಲ್, 2005

ಬೆಂಗಳೂರು ಗ್ರಾಮಾಂತರ ಜಿಲ್ಲೆಯ ವ್ಯಾಪ್ತಿಯಲ್ಲಿರುವ ಈ ಕೆಳಕಂಡ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶದಲ್ಲಿ 56 ಗುಡಿಸಲುಗಳಿದ್ದು ಇಲ್ಲಿನ ಜನಸಂಖ್ಯೆ ಸುಮಾರು 217 (ಇನ್ನೂರು ಹದಿನೇಳು) ಇರುತ್ತದೆ. ಈ ಕೊಳಚೆ ಪ್ರದೇಶವು ಮೂಲಭೂತ ಸೌಕರ್ಯಗಳಿಂದ ವಂಚಿತವಾದ ಜಾಗದಲ್ಲಿ ಜನಸಂದಣಿ, ಮಾಲಿನ್ಯ ಅನಾರೋಗ್ಯ ವಾತಾವರಣದಿಂದ ಕೂಡಿರುತ್ತದೆಂತಲೂ, ಸದರಿ ಪ್ರದೇಶಕ್ಕೆ ಮೂಲಭೂತ ಸೌಲಭ್ಯಗಳಾದ ಕುಡಿಯುವ ನೀರು, ದೀಪ, ರಸ್ತೆ, ಚರಂಡಿ ಶೌಚಗೃಹ ಇತ್ಯಾದಿಗಳ ಸೌಕರ್ಯಗಳ ಅವಶ್ಯಕತೆ ಇರುವುದಾಗಿ, ಸಂಬಂಧಪಟ್ಟ ನಗರಸಭೆಯಿಂದ ಸದರಿ ಪ್ರದೇಶಕ್ಕೆ ಅಲ್ಪಸ್ವಲ್ಪ ಸೌಕರ್ಯಗಳನ್ನು ಮಾತ್ರ ನೀಡಲಾಗಿದೆಯೆಂತಲೂ ಹಾಗೂ ಸದರಿ ಪ್ರದೇಶದ ನಿವಾಸಿಗಳು ಸುಮಾರು 15 ವರ್ಷಗಳಿಂದ ಅಲ್ಲಿಯೇ ವಾಸವಾಗಿರುತ್ತಾರೆಂತಲೂ ಹಾಗೂ ಈ ಪ್ರದೇಶದ ನಿವಾಸಿಗಳ ಹೆಸರು 2000ದ ವಿಧಾನ ಸಭಾ ಮತದಾರರ ಪಟ್ಟಿಯಲ್ಲಿ ಕಂಡುಬಂದಿರುತ್ತದೆಯಾಗಿ ಸ್ಥಳ ತನಿಖೆಯಿಂದ ತಿಳಿದು ಬಂದಿದೆ ಎಂದು ಕೊಳಚೆ ನಿರ್ಮೂಲನಾ ಮಂಡಳಿಯ ಆಯುಕ್ತರು ಪತ್ರ ಸಂಖ್ಯೆ: ಕಕೊನಿಮ: ರೆ.ಸಿ.ಘೋ.3:04-05:986 ದಿನಾಂಕ: 06.12.2004ರಂತೆ ಪತ್ರ ಬರೆದಿದ್ದು, ದಿನಾಂಕ: 26.03.2005ರಂದು ಸದರಿ ಪ್ರದೇಶವನ್ನು ಕೊಳಚೆ ಪ್ರದೇಶವೆಂದು ಘೋಷಿಸಬಹುದೆಂದು ಶಿಫಾರಸ್ಸು ಮಾಡಿ ತಹಶೀಲ್ದಾರ್, ರಾಮನಗರಂ ರವರು ಪತ್ರ ಸಂಖ್ಯೆ: ಆರ್‌ಆರ್‌ಟಿ. ಸಿಆರ್ 1898:04-05 ದಿನಾಂಕ: 13.04.2005ರಂತೆ ಪತ್ರ ಬರೆದಿರುತ್ತಾರೆ.

ಆದ್ದರಿಂದ, ಮೇಲ್ಕಂಡ ಎಲ್ಲಾ ಕಾರಣಗಳಿಂದ ಈ ಕೆಳಗಿನ ಷೆಡ್ಯೂಲ್‌ನಲ್ಲಿ ನಮೂದಿಸಿರುವ ಪ್ರದೇಶವನ್ನು ಕರ್ನಾಟಕ ಕೊಳಚೆ ಪ್ರದೇಶ (ಅಭಿವೃದ್ಧಿ ಮತ್ತು ನಿರ್ಮೂಲನಾ) ಕಾಯ್ದೆ 1973ರ ಕಲಂ 3ರ ಪ್ರಕಾರ ಹಾಗೂ ಸರ್ಕಾರದ ಅಧಿಸೂಚನೆ ಸಂಖ್ಯೆ: ನನಇ 49 ಎಂಸಿಎಸ್ 85 ದಿನಾಂಕ: 17.04.1986ರ ಪ್ರಕಾರ ಜಿಲ್ಲಾಧಿಕಾರಿಗಳಿಗೆ ದತ್ತವಾಗಿರುವ ಅಧಿಕಾರದಂತೆ ಬೆಂಗಳೂರು ಗ್ರಾಮಾಂತರ ಜಿಲ್ಲೆಯ ರಾಮನಗರಂ ನಗರಸಭೆಯ ವ್ಯಾಪ್ತಿಯ ಈ ಕೆಳಗೆ ಬರುವ ಷೆಡ್ಯೂಲ್ ಸ್ವತ್ತನ್ನು ಕೊಳಚೆ ಪ್ರದೇಶವೆಂದು ಘೋಷಿಸಲು ಉದ್ದೇಶಿಸಲಾಗಿದೆ.

ಈ ಮೇಲ್ಕಂಡ ಕ್ರಮದ ಬಗ್ಗೆ ಆಕ್ಷೇಪಣೆಗಳು ಇದ್ದಲ್ಲಿ, ಬೆಂಗಳೂರು ಗ್ರಾಮಾಂತರ ಜಿಲ್ಲಾಧಿಕಾರಿಗಳಿಗೆ ಅಥವಾ ಆಯುಕ್ತರು, ಕರ್ನಾಟಕ ಕೊಳಚೆ ಪ್ರದೇಶ ನಿರ್ಮೂಲನಾ ಮಂಡಳಿ, ನಂ.55, ರಿಸ್‌ಲ್ದಾರ್ ರಸ್ತೆ, ಶೇಷಾದ್ರಿಪುರಂ, ಬೆಂಗಳೂರು-560 020 ರವರಿಗೆ ಲಿಖಿತ ಮೂಲಕ ಆಕ್ಷೇಪಣೆಗಳನ್ನು ಸಲ್ಲಿಸಲು ಈ ಅಧಿಸೂಚನೆಯು ರಾಜ್ಯ ಪತ್ರದಲ್ಲಿ ಪ್ರಕಟವಾದ ದಿನಾಂಕದಿಂದ 15 ದಿವಸದವರೆವಿಗೆ ಕಾಲಾವಕಾಶವನ್ನು ನೀಡಲಾಗಿದೆ. ನಂತರ ಬಂದ ಆಕ್ಷೇಪಣೆಗಳನ್ನು ಪರಿಗಣಿಸಲಾಗುವುದಿಲ್ಲವೆಂದು ತಿಳಿಸಲಾಗಿದೆ.

**ಷೆಡ್ಯೂಲ್**

| ಕ್ರಮ ಸಂಖ್ಯೆ | ಕೊಳಚೆ ಪ್ರದೇಶದ ಹೆಸರು | ಸ್ವತ್ತಿನ ಮಾಲಿಕರ ಹೆಸರು | ಸ.ನಂ. | ವಿಸ್ತೀರ್ಣ |
|---|---|---|---|---|
| 1. | ಚೌಲಿಪುರ | ಖಾಸಗಿ | ಬೋಳಪ್ಪನಹಳ್ಳಿ ಸ.ನಂ. 66:4ಎ 1ಸಿ, 66:4ಎ 1ಡಿ, ಹಾಗೂ 66:4ಎ 1ಬಿ, ಒಳಗೊಂಡ ಪ್ರದೇಶ. | 0-22 |

**ಚೆಕ್ಕುಬಂದಿ**

ಪೂರ್ವಕ್ಕೆ : ಖಾಸಗಿ ಮನೆ
ಪಶ್ಚಿಮಕ್ಕೆ : ಖಾಸಗಿ ಮನೆಗಳು
ಉತ್ತರಕ್ಕೆ : ಸರ್ಕಾರಿ ಕೋಡಿಹಳ್ಳಿ
ದಕ್ಷಿಣಕ್ಕೆ : ರಸ್ತೆ

ಬಿ.ಪಿ. ಕನಿರಾಂ
ಪಿ.ಆರ್.707 ಜಿಲ್ಲಾಧಿಕಾರಿಗಳು, ಬೆಂಗಳೂರು ಗ್ರಾಮಾಂತರ ಜಿಲ್ಲೆ.

## ಜಿಲ್ಲಾಧಿಕಾರಿಗಳ ಕಾರ್ಯಾಲಯ, ಕೋಲಾರ ಜಿಲ್ಲೆ, ಕೋಲಾರ

### ಅಧಿಸೂಚನೆ

**ಸಂಖ್ಯೆ: ಎಲ್.ಆರ್.ಎಫ್ (ಕಲಂ 109) ಸಿಆರ್: 15/2004-05, ಬೆಂಗಳೂರು, ದಿನಾಂಕ: 4ನೇ ಮೇ, 2005**

ಕೋಲಾರ ತಾಲ್ಲೂಕು, ಕಸಬಾ ಹೋಬಳಿ, ದೊಡ್ಡಹಸಾಳ ಗ್ರಾಮದ ಸ.ನಂ. 32ರ ಪೈಕಿ 1-29 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(I)ರಡಿಯಲ್ಲಿ ಅನುಮತಿಯನ್ನು ನೀಡಲು ಕೋರಿ ಕಾರ್ಯದರ್ಶಿ, ಕೋಲಾರ ಜಿಲ್ಲಾ ಕುಂಬಾರರ ಸಾರ್ವಜನಿಕ ವಿದ್ಯಾರ್ಥಿನಿಲಯ (ರಿ) ಕೀಲುಕೋಟೆ ಬಡಾವಣೆ ಕೋಲಾರ ರವರು ಅಗತ್ಯ ದಾಖಲೆಗಳೊಂದಿಗೆ ನಮೂನೆ 15ಎ ರಲ್ಲಿ ಅರ್ಜಿಯನ್ನು ಸಲ್ಲಿಸಿರುವ ಸಂಬಂಧ ಕೋಲಾರ ತಾಲ್ಲೂಕು ತಹಶೀಲ್ದಾರ್ ರವರು ಪತ್ರದ ಸಂಖ್ಯೆ: ಎಲ್ಆರ್ಎಫ್.ಸಿಆರ್ 123/ 2004-05 ದಿನಾಂಕ 17.02.2005ರಂತೆ ಕಡತ ತಯಾರಿಸಿ ಪ್ರಸ್ತಾವನೆಯನ್ನು ಸಲ್ಲಿಸಿದ್ದು ಸದರಿ ಪ್ರಸ್ತಾವನೆಯನ್ನು ಸಹಾಯಕ ಕಮೀಷನರ್ ಕೋಲಾರ ಉಪ ವಿಭಾಗ ರವರು ಪರಿಶೀಲಿಸಿ ಮೇಲ್ಕಂಡ ಜಮೀನನ್ನು ಕ್ರಯಕ್ಕೆ ಪಡೆಯಲು ಅರ್ಜಿದಾರರಿಗೆ ಅನುಮತಿಯನ್ನು ನೀಡಲು ಪತ್ರ ನಂ. ಎಲ್ಆರ್ಎಫ್.ಸಿಆರ್ 27/ 2004-05 ದಿನಾಂಕ: 05.03.2005ರಂತೆ ಶಿಫಾರಸ್ಸು ಮಾಡಿರುತ್ತಾರೆ.

ಪ್ರಸ್ತಾವನೆಯನ್ನು ಪರಿಶೀಲಿಸಲಾಗಿರುತ್ತೆ. ದೊಡ್ಡಹಸಾಳ ಗ್ರಾಮದ ಸ.ನಂ. 32ರ ಪೈಕಿ 1-29 ಎಕರೆ ಜಮೀನಿನ ಖಾತೆ ಶ್ರೀಮತಿ ಜಯಮ್ಮ ಕೋಂ ಮುನಿಯಪ್ಪ ಎಂಬುವವರ ಹೆಸರಿನಲ್ಲಿದ್ದು ಈ ಜಮೀನು ಸದರಿಯವರಿಗೆ ಕ್ರಯದ ಮೂಲಕ ಬಂದಿರುತ್ತದೆ. ಮೇಲ್ಕಂಡ ಜಮೀನನ್ನು ಅರ್ಜಿದಾರರಿಗೆ ಕ್ರಯಕ್ಕೆ ನೀಡಲು ಒಪ್ಪಿ ಕರಾರು ಪತ್ರವನ್ನು ಬರೆಸಿಕೊಟ್ಟಿರುತ್ತಾರೆ. ಪ್ರಸ್ತಾಪಿತ ಜಮೀನು ಕರ್ನಾಟಕ ಭೂ ಮಂಜೂರಾತಿ ನಿಯಮಗಳು, ಕರ್ನಾಟಕ ಭೂ ಸುಧಾರಣೆ ಕಾಯ್ದೆ, ಇನಾಂ ರದ್ದಿಯಾತಿ ಕಾಯ್ದೆ ಮತ್ತು ಪಿ.ಟಿ.ಸಿ.ಎಲ್. ಕಾಯ್ದೆಗಳ ವ್ಯಾಪ್ತಿಗೆ ಒಳಪಟ್ಟಿರುವುದಿಲ್ಲ. ಮೇಲ್ಕಂಡ ಜಮೀನಿಗೆ ಸಂಬಂಧಿಸಿದಂತೆ ಯಾರೂ ಗೇಣಿ ಅರ್ಜಿಯನ್ನು ಸಲ್ಲಿಸಿರುವುದಿಲ್ಲ.

ಕೋಲಾರ ಜಿಲ್ಲಾ ಕುಂಬಾರರ ಸಾರ್ವಜನಿಕ ವಿದ್ಯಾರ್ಥಿನಿಲಯ (ರಿ) (Trust) ಉಪ ನೋಂದಣಾಧಿಕಾರಿಗಳು ಕೋಲಾರ ರವರ ಕಾರ್ಯಾಲಯದಲ್ಲಿ ಸಂಖ್ಯೆ: 186/85-86 ರಂತೆ ದಿನಾಂಕ: 20.01.86 ರಂದು ನೋಂದಾಯಿಸಲ್ಪಟ್ಟಿರುತ್ತೆ. ಅರ್ಜಿದಾರರು ಪ್ರಸ್ತಾಪಿತ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಉದ್ದೇಶಿಸಿದ್ದು ಇವರು ಹಾಜರುಪಡಿಸಿರುವ ದಾಖಲೆಗಳು ಉದ್ದೇಶಿತ ಕಾರ್ಯಕ್ಕೆ ಪೂರಕವಾಗಿರುತ್ತೆ.

ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II) ರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 4 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಹೊಂದಲು ಅವಕಾಶವನ್ನು ಕಲ್ಪಿಸಿದ್ದು ಸರ್ಕಾರಿ ಅಧಿಸೂಚನೆ ಸಂಖ್ಯೆ: ಸಂವ್ಯಶಾಇ 47 ಶಾಸನ 2001 ಬೆಂಗಳೂರು ದಿನಾಂಕ: 23.04.2003ರಂತೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109(I)ಕ್ಕೆ ತಿದ್ದುಪಡಿಯನ್ನು ತಂದಿರುತ್ತೆ. (ಕರ್ನಾಟಕ ಭೂ ಸುಧಾರಣೆ ತಿದ್ದುಪಡಿ ಕಾಯ್ದೆ 2002) ಇದರಂತೆ ಶೈಕ್ಷಣಿಕ ಉದ್ದೇಶಕ್ಕಾಗಿ 2 ಯೂನಿಟ್‌ಗಳಿಗೆ ಮೀರದಂತೆ ಜಮೀನನ್ನು ಕ್ರಯಕ್ಕೆ ಪಡೆಯಲು/ ದಾನವಾಗಿ ಪಡೆಯಲು ಅನುಮತಿ/ ವಿನಾಯ್ತಿಯನ್ನು ನೀಡುವ ಅಧಿಕಾರವನ್ನು ಜಿಲ್ಲಾಧಿಕಾರಿಗಳಿಗೆ ನೀಡಿರುತ್ತೆ. ಇದರಂತೆ ಈ ಪ್ರಸ್ತಾವನೆಯು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II)ಕ್ಕೆ ಅನುಗುಣವಾಗಿರುತ್ತೆ. ಮೇಲ್ಕಂಡ ಅಂಶಗಳಡಿಯಲ್ಲಿ ಕೋಲಾರ ತಾಲ್ಲೂಕು ಕಸಬಾ ಹೋಬಳಿ ದೊಡ್ಡಹಸಾಳ ಗ್ರಾಮದ ಸ.ನಂ. 32ರ ಪೈಕಿ 1-29 ಎಕರೆ ಜಮೀನನ್ನು ಶೈಕ್ಷಣಿಕ ಉದ್ದೇಶಕ್ಕಾಗಿ ಕ್ರಯಕ್ಕೆ ಪಡೆಯಲು ಕಾರ್ಯದರ್ಶಿಗಳು ಕೋಲಾರ ಜಿಲ್ಲಾ ಕುಂಬಾರರ ಸಾರ್ವಜನಿಕ ವಿದ್ಯಾರ್ಥಿನಿಲಯ (ರಿ) ಕೀಲುಕೋಟೆ ಬಡಾವಣೆ ಕೋಲಾರ ಇವರಿಗೆ ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 79ಎ, 79ಬಿ ಮತ್ತು 80ಗಳಿಗೆ ವಿನಾಯ್ತಿಯನ್ನು ನೀಡಿ ಮೇಲ್ಕಂಡ ಜಮೀನನ್ನು ದಾನವಾಗಿ ಪಡೆಯಲು ಕರ್ನಾಟಕ ಭೂ ಸುಧಾರಣೆ ಕಾಯ್ದೆ 1961ರ ಕಲಂ 109 (I) (II)ರಂತೆ ಅನುಮತಿಯನ್ನು ಈ ಕೆಳಕಂಡ ಷರತ್ತುಗಳಿಗೆ ಒಳಪಟ್ಟು ನೀಡಲಾಗಿದೆ.

1. ಯಾವ ಉದ್ದೇಶಕ್ಕಾಗಿ ಜಮೀನನ್ನು ಕ್ರಯಕ್ಕೆ ಪಡೆಯಲು ಅನುಮತಿ ನೀಡಲಾಗಿದೆಯೋ ಅದೇ ಉದ್ದೇಶಕ್ಕಾಗಿ ಸದರಿ ಜಮೀನನ್ನು ಎರಡು ವರ್ಷಗಳೊಳಗಾಗಿ ಉಪಯೋಗಿಸಿಕೊಳ್ಳತಕ್ಕದ್ದು ಹಾಗೂ ಈ ಬಗ್ಗೆ ಲಿಖಿತ ಮೂಲಕ ಮಾಹಿತಿಯನ್ನು ಈ ಕಛೇರಿಗೆ ನೀಡತಕ್ಕದ್ದು.
2. ವಿನಾಯಿತಿ: ಅನುಮತಿ ಪಡೆದವರು ಸರ್ಕಾರ ಅಥವಾ ಯಾವುದೇ ಷೆಡ್ಯೂಲ್ ಬ್ಯಾಂಕ್ ಅಥವಾ ಸಹಕಾರಿ ಕೃಷಿ ಮತ್ತು ಗ್ರಾಮೀಣಾಭಿವೃದ್ಧಿ ಬ್ಯಾಂಕ್ ಒಂದಕ್ಕೆ ಅಥವಾ ಕಂಪನಿ ಕಾಯಿದೆ 1956ರ ಕಲಂ 3ರಲ್ಲಿ ಹೇಳಿರುವಂತೆ, ಶೇ.55 ಪೆಯಿಡ್ ಅಪ್ ಷೇರು ಬಂಡವಾಳ ಹೊಂದಿದ ರಾಜ್ಯ ಸರ್ಕಾರ ಅಥವಾ ಕೇಂದ್ರ ಸರ್ಕಾರದ ಅಥವಾ ರಾಜ್ಯ ನಿಯಂತ್ರಿತ ಅಥವಾ ಎರಡರ ಹಿಡಿತ ಹೊಂದಿರುವ ಸರ್ಕಾರದ ಸಂಘ ಸಂಸ್ಥೆ ಒಂದಕ್ಕೆ ಖಾತರಿ ನೀಡಿ ಅಡಮಾನ ಹಾಗೂ ಇತರೆ ಹೊಣೆಮಾಡಿ ಸಾಲ ಪಡೆಯುವುದನ್ನು ಹೊರತುಪಡಿಸಿ ಸದರಿ ಜಮೀನನ್ನು ನಿಗದಿತ ಉದ್ದೇಶಕ್ಕಾಗಿ ಅಲ್ಲದೆ ಬೇರೆ ಉದ್ದೇಶಕ್ಕೆ ಬಳಸತಕ್ಕದ್ದಲ್ಲ.
3. ಈ ಜಮೀನನ್ನು ವ್ಯವಸಾಯದಿಂದ ವ್ಯವಸಾಯೇತರ ಉದ್ದೇಶಕ್ಕಾಗಿ ಪರಿವರ್ತಿಸಿಕೊಳ್ಳಲು ಭೂ ಕಂದಾಯ ಕಾಯಿದೆ 1964ರ ಕಲಂ 95ರಂತೆ ಜಿಲ್ಲಾಧಿಕಾರಿಗಳಿಂದ (ಸಕ್ಷಮ ಪ್ರಾಧಿಕಾರದಿಂದ) ಅನುಮತಿ ಪಡೆಯಬೇಕು.
4. ಈ ಜಮೀನು ನಗರಾಭಿವೃದ್ಧಿ ಪ್ರಾಧಿಕಾರ ಸಿ.ಡಿ.ಪಿ.:ಓ.ಡಿ.ಪಿ. ಗ್ರಾಮ ಪಂಚಾಯಿತಿಯ ವ್ಯಾಪ್ತಿಯ ಒಳಗೆ ಬಂದರೆ ಅದರಂತೆ ಅನುಮತಿ ಪಡೆದು ಉಪಯೋಗಿಸಿಕೊಳ್ಳತಕ್ಕದ್ದು.
5. ಮೇಲಿನ ಷರತ್ತುಗಳು ಉಲ್ಲಂಘನೆಯಾದಲ್ಲಿ ಈಗ ನೀಡಲಾಗಿರುವ ಅನುಮತಿಯನ್ನು ಕಾನೂನು ರೀತ್ಯಾ ರದ್ದುಪಡಿಸಲಾಗುವುದು. ಮತ್ತು ಪ್ರಸ್ತಾಪಿತ ಜಮೀನನ್ನು ಋಣ ಮುಕ್ತವಾಗಿ ಸರ್ಕಾರದಲ್ಲಿ ನಿಹಿತ ಮಾಡಿಕೊಳ್ಳಲಾಗುವುದು.
6. ಈ ಅನುಮತಿಯು ಭೂ ಸುಧಾರಣಾ ಕಾಯ್ದೆ 1961ರ ಕಲಂ 109(I) (II)ರನ್ವಯ ಮಾತ್ರವಾಗಿರುತ್ತದೆ. ಬೇರೆ ಕಾನೂನುಗಳ ಉಲ್ಲಂಘನೆಯಾದಲ್ಲಿ ಸಂಬಂಧಿಸಿದ ಕಾಯ್ದೆಯಡಿ ಅಗತ್ಯಕ್ರಮ ಜರುಗಿಸಲು ಅವಕಾಶವಿರುತ್ತದೆ.
7. ಸದರಿ ಜಮೀನು ಕೋಲಾರ ಬಂಗಾರಪೇಟೆ ರೈಲ್ವೆ ರಸ್ತೆ ಬಾಜು ಇರುವುದರಿಂದ ನಿಯಮಾನುಸಾರ ಅಗತ್ಯವಿರುವ ರಸ್ತೆ ಮಾರ್ಜಿನ್ ಬಿಡತಕ್ಕದ್ದು.

ಪಿ.ಆರ್.708 ಜಿಲ್ಲಾಧಿಕಾರಿಗಳು, ಕೋಲಾರ ಜಿಲ್ಲೆ.

